ಶ್ರೀಃ

ಶ್ರೀ ಮಹಾಗಣಾಧಿಪತಯೇ ನಮಃ

# ಋಗ್ವೇದಪರಿಚಯ

## (ಮಂಡಲ - ೨, ೩, ೪)

ಗ್ರಂಥಕರ್ತರು

**ಸೂರ್ಯನಾರಾಯಣ**

*ಯೋವೇದಾದೌಸ್ವರಃ ಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತ |*
*ತಸ್ಯಪ್ರಕೃತಿಲೀನಸ್ಯ ಯಃಪರಃಸಮಹೇಶ್ವರಃ ||*
*ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ |*
*ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ||*

ಗ್ರಂಥಕರ್ತರು ಮತ್ತು ಪ್ರಕಾಶಕರು

**ಸೂರ್ಯನಾರಾಯಣ**

'ಇಂದ್ರ'

ಬಿ - 1/11, ಬೆಂ.ಅ.ಪ್ರಾ. ನಿವಾಸಗಳು,

ಕಲ್ಲಹಳ್ಳಿ, ಅಲಸೂರುಕೆರೆ ಬಳಿ,

ಬೆಂಗಳೂರು ೪೨

RIGVEDA PARICHAYA - MANDALA - 2,3 and 4
IN KANNADA SCRIPT. WRITTEN AND PUBLISHED BY
SURYANARAYANA
B-1/11 B.D.A. FLATS,
KALLAHALLI, NEAR ULSOOR LAKE,
BANGALORE - 560 042.
PHONE: 080 - 554 22 97

THIS BOOK IS PUBLISHED WITH THE FINANCIAL ASSISTANCE OF TIRUMALA TIRUPATI DEVASTANAM UNDER THEIR SCHEME "AID TO PUBLISH RELIGIOUS BOOKS"

ಪ್ರಥಮ ಮುದ್ರಣ – ಜನವರಿ 1998
ಪ್ರತಿಗಳು – 750
ಪುಸ್ತಕದ ಹಕ್ಕುಗಳೆಲ್ಲಾ – ಗ್ರಂಥಕರ್ತರವು.

ಬೆಲೆ : ರೂ.50–00

ಕೃತಜ್ಞತೆ :

1) ಪ್ರಕಟಣೆಗೆ ಆರ್ಥಿಕನೆರವು ನೀಡಿದ್ದಕ್ಕಾಗಿ – ಆಡಳಿತ ಮಂಡಲಿ ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ.
2) ಗ್ರಂಥಪ್ರಯೋಜನ ಸೌಕರ್ಯಕ್ಕಾಗಿ – ವಿವೇಕಾನಂದ ಆಶ್ರಮ, ಅಲಸೂರು, ಬೆಂಗಳೂರು.
3) ಮಾರ್ಗದರ್ಶನಕ್ಕಾಗಿ – ರಾಷ್ಟ್ರಪ್ರಶಸ್ತಿ ರಾಜ್ಯಪ್ರಶಸ್ತಿ ಸನ್ಮಾನಿತ, ವಿದ್ವಾನ್ ಕೋಡೂರು ಕೃಷ್ಣಜೋಯಿಸರು, ಶಂಕರಮಠ, ಬೆಂಗಳೂರು.
4) ಆಶೀರ್ವಾದಪೂರ್ವಕ ಮುನ್ನುಡಿಗಾಗಿ – ಶ್ರೀ ನಾರಾಯಣಾಶ್ರಮ ಸ್ವಾಮಿಗಳು, ಕೋದಂಡಾಶ್ರಮ ಮಠ, ಹೆಬ್ಬೂರು, ತುಮಕೂರು.
5) ಮುದ್ರಣ ಪ್ರತಿಯ ಶೋಧಕ್ಕೆ – ಶ್ರೀ ಶ್ರೀನಿವಾಸರಾವ್, ಗಣೇಶ ದೇವಸ್ಥಾನದ ರಸ್ತೆ, ತ್ಯಾಗರಾಜನಗರ, ಬೆಂಗಳೂರು – 28
6) ಡಿ.ಟಿ.ಪಿ. 'ಇಂದ್ರ' ಬಿ–1/11, ಬಿ.ಡಿ.ಎ. ನಿವಾಸಗಳು, ಕಲ್ಲಹಳ್ಳಿ, ಬೆಂಗಳೂರು–42.
7) ಮುದ್ರಕರು : ಆರಿದ್ರಾ ಪ್ರಿಂಟರ್ಸ್, ಮಲ್ಲೇಶ್ವರಂ, ಬೆಂಗಳೂರು – 3.
ಓಮ್ ಕಾಮ್ಪ್ಸ್ ಸೆಂಟರ್, ರಾಜಾಜಿನಗರ, ಬೆಂಗಳೂರು – 10.

ಗ್ರಂಥಮೂಲ : ಶ್ರೀಜಯಚಾಮರಾಜೇಂದ್ರ ವೇದರತ್ನ ಮಾಲ – ಮೈಸೂರು ಪ್ರಕಟಿಸಿದ – 'ಋಗ್ವೇದ ಸಂಹಿತಾ' – ಮಾಲಿಕೆ.

ಋಗ್ವೇದಪರಿಚಯ ಮಂಡಲ – 5 ಮತ್ತು 6 ಸದ್ಯದಲ್ಲೇ ಪ್ರಕಟಣೆಗೊಳ್ಳಲಿದೆ.

[illegible]

ಶ್ರೀ ಕಾಮಾಕ್ಷೀ ಶಾರದಾಂಬಾಯೈ ನಮಃ

'ಋಗ್ವೇದ ಪರಿಚಯ' ಎಂಬ ಗ್ರಂಥದ ಒಂದರಿಂದ ನಾಲ್ಕನೆಯ ಮಂಡಲದ ಸಂಗ್ರಹರೂಪವನ್ನು ಅವಲೋಕಿಸಿ ತುಂಬಾ ಸಂತೋಷವಾಯಿತು. ಒಂದೊಮ್ಮೆ, 'ಮಂತ್ರದ ಅರ್ಥವನ್ನೇ ತಿಳಿಯಬಾರದು' -ಎಂದು ಅಪ್ಪರ ಕಲ್ಪನೆಯಿತ್ತು. ನಂತರ, ವಿದ್ಯಾರಣ್ಯ ಸಾಯನ ಭಾಷ್ಯವು, ಜಿಜ್ಞಾಸುಗಳಿಗೆ, ಅದರಲ್ಲೂ ಸಂಸ್ಕೃತವನ್ನು ಚೆನ್ನಾಗಿ ಅಭ್ಯಾಸ ಮಾಡಿದ ವಿಧ್ವಾಂಸರುಗಳಿಗೆ ಮಾತ್ರ. -ಮಂತ್ರಾರ್ಥಗಳ ಪರಿಚಯವು- ಸ್ವಲ್ಪಮಟ್ಟಿಗೆ ತಿಳಿಯುವಂತಾಯಿತು. ಮೈಸೂರು ಮಹಾರಾಜರ ಆಶ್ರಯದಿಂದ, ಪ್ರಕಟವಾದ ಕನ್ನಡ ಮತ್ತು ಆಂಗ್ಲದ ಅನುವಾದವು, ಹೆಚ್ಚಿನ ಜನರಿಗೆ, ವೇದಾರ್ಥ ಜ್ಞಾನವನ್ನು ತಿಳಿಯಲು, ಸಹಾಯ ಮಾಡಿತು. ಒಂದೊಂದು ಸೂಕ್ತದಲ್ಲಿಯೂ ಒಬ್ಬನೇ ದೇವರ ಹಲವು ಮಹಿಮೆಗಳು ಹಲವಾರು ಮಂತ್ರಗಳಿಂದ ಸ್ತುತಿಸಲ್ಪಡುವುದರಿಂದ ಸಾಮಾನ್ಯ ಜನರಿಗೆ ಅವಷ್ಟನ್ನೂ, ನೆನಪಿನಲ್ಲಿಡಲು ಸಾಧ್ಯವಾಗಲಾರದು ಅಲ್ಲದೇ ಶ್ರೌತ ಸೂತ್ರ ಮತ್ತು ಗೃಹ್ಯ ಸೂತ್ರಗಳನ್ನೂ, ಯಾಜ್ಞಿಕ ಪರಿಭಾಷೆಗಳನ್ನೂ, ಅರಿಯದ ವಿಧ್ವಾಂಸರಿಗೂ ಸಹ ಆ ಅನುವಾದಗಳಿಂದ ನಿರೀಕ್ಷಿಸಿದಷ್ಟು ಫಲವು ಲಭ್ಯವಾಗದು -ಎಂದು ತಿಳಿದ ಶ್ರೀ ಸೂರ್ಯನಾರಾಯಣರವರು "ಋಗ್ವೇದ ಪರಿಚಯ" ಎಂಬ ಈ ಗ್ರಂಥದಲ್ಲಿ ಯಾವ ವಿಷಯವೂ ಪುನರುಕ್ತವಾಗದಂತೆ, ಮುಖ್ಯವಾಗಿ ಎಷ್ಟು ವಿಷಯಗಳನ್ನು ತಿಳಿಯಬೇಕೋ ಅವಷ್ಟನ್ನೇ ಸಂಗ್ರಹಿಸಿ ಈ ಗ್ರಂಥದಲ್ಲಿ ಜನಸಾಮಾನ್ಯರಿಗೂ ಮಂತ್ರಾರ್ಥದ ಮತ್ತು ಮಂತ್ರಗಳ ಜ್ಞಾನದಿಂದ ಉಂಟಾಗುವ ಸದವಕಾಶವನ್ನು ಈ ಪುಸ್ತಕದಲ್ಲಿ ಕೊಟ್ಟಿರುವರು. ಈ ಪುಸ್ತಕದಲ್ಲಿನ ಮತ್ತೊಂದು ಹೆಚ್ಚಿನ ವಿಶೇಷತೆಯೆಂದರೆ, ಪ್ರತಿಯೊಂದು ಮಂಡಲದ ಒಂದೊಂದು ಸೂಕ್ತವನ್ನೂ ಅಂಕೆಗಳಿಂದ ಹಾಗೂ ಮಂತ್ರದ ಪ್ರತೀಕಗಳಿಂದ ತಿಳಿಸಿರುವುದು. ಇದರಿಂದ ಯಾವ ಮಂಡಲದಲ್ಲೇ ಆಗಲಿ, ಯಾವ ದೇವತೆಯ ವಿಷಯದಲ್ಲೇ ಆಗಲಿ, ಸಾಮಾನ್ಯ ಜನರಿಗೂ ಪಾರಾಯಣ ಮಾಡುವಾಗ, ಮಧ್ಯದಲ್ಲಿ ಉಂಟಾಗಬಹುದಾದ ಸಂಶಯಗಳನ್ನು ಪರಿಹರಿಸಿಕೊಂಡು ಅಧ್ಯಯನ ಮಾಡಲು ಅನುಕೂಲವಾಗಿದೆ. ಸೋಮಯಾಗದ ಅನುಭವವಿಲ್ಲದ ಜನರಿಗೆ (ವೇದವನ್ನು ನಾಲ್ಕು ವಿಧವಾಗಿ ವಿಭಾಗಿಸಿ ಜನತೆಗೆ ಕೊಟ್ಟಿರುವ ವೇದವ್ಯಾಸರು ಶ್ರೀಮನ್ ಮಹಾಭಾರತದಲ್ಲಿ "ಅಗ್ನಿ ಹೋತ್ರ ಫಲವೇದಾಃ" -ಸಮಸ್ತ ಮಂತ್ರಗಳಿಗೂ ತ್ರೇತಾಗ್ನಿಯಲ್ಲಿಯೇ ವಿನಿಯೋಗವಿರುವವು) ಸಾಧ್ಯವಾದಷ್ಟು ಅರ್ಥಜ್ಞಾನವಾಗುವಂತೆ, ವಿವರಿಸಿರುವುದು ಪ್ರಶಂಸನೀಯವಾಗಿದೆ. ಹಿಂದಿದ್ದ ಪುಸ್ತಕಗಳೆಲ್ಲವೂ ಮೊದಮೊದಲು ಮುದ್ರಿತವಾಗಿ ಬಂದಾಗ, ಅಷ್ಟಕ ರೂಪದಲ್ಲಿಯೇ ಮುದ್ರಣವನ್ನು ಹೊಂದಿ, ಪತ್ರಾತ್ಮಕವಾಗಿ ಲಭಿಸುತ್ತಿದ್ದವು ಅಂತಹ ಪುಸ್ತಕಗಳು ಯಾರ ಮನೆಯಲ್ಲಾದರೂ ಹಿರಿಯರಿಂದ ಸಂಗ್ರಹಿಸಲ್ಪಟ್ಟಿರುವಲ್ಲಿ, ಅಂತಹ ಓದುಗರಿಗೂ ಅನುಕೂಲವಾಗುವಂತೆ, ಅಷ್ಟಕ ಕ್ರಮದಲ್ಲಿಯೂ, ವಿವರಣೆ ಕೊಟ್ಟಿರುವುದು ಅವರಿಗೂ

ಅನುಕೂಲವಾಗುವುದು. ಇದೇ ಋಗ್ವೇದದಲ್ಲಿ ಅಗ್ನಿ ಮತ್ತು ಇಂದ್ರದೇವತೆಗಳನ್ನು ಸ್ತುತಿಸುವ ಮಂತ್ರಗಳೇ ಹೆಚ್ಚಾಗಿರುವುದರಿಂದ, ಅಂತಹ ಕಡೆಯಲ್ಲಿ ಸಂಗ್ರಹರೂಪದಲ್ಲಿ ಪುನರುಕ್ತಿಯಿಲ್ಲದೇ ವಿಷಯಗಳನ್ನೇ ಆ ಬಾಲ ವೃದ್ಧರಿಗೂ ತಿಳಿಯುವಂತೆ ಇರುವುದು. ಇವರ ಬರವಣಿಗೆಯೂ ಈಗ ನಾಲ್ಕು ಮಂಡಲದವರೆಗೆ ಮುದ್ರಣವಾಗಿ, ಈ ಗ್ರಂಥವು ಜನಸಾಮಾನ್ಯರ ಕೈಗೆ ಸಿಕ್ಕಿರುವುದು. ಮುಂದಿನ ಮಂಡಲದ ಮಂತ್ರಗಳೂಸಹ ಮುಖ್ಯಾರ್ಥದಿಂದ ಕೂಡಿದ ಇವರ ಋಗ್ವೇದ ಪರಿಚಯ - ಗ್ರಂಥವು, ಅವರ ನಿರೀಕ್ಷೆಗಿಂತ ಮೊದಲೇ ಮುದ್ರಿತವಾಗಿ, ಎಲ್ಲರಿಗೂ ಲಭಿಸಿ, ತನ್ಮೂಲಕ ಸಮಾಜ ಕಲ್ಯಾಣವಾಗಲಿ -ಎಂದು ಶ್ರೀ ಕಾಮಾಕ್ಷೀ ಶಾರದಾಂಬೆಯನ್ನು ಪ್ರಾರ್ಥಿಸಿ ಸುವರ್ಣ ಮಂತ್ರಾಕ್ಷತೆಯನ್ನು ಕಳುಹಿಸಿರುವೆವು.

ಶ್ರೀ ನಾರಾಯಣಾಶ್ರಮ ಸ್ವಾಮಿಗಳವರು
ಕೋದಂಡಾಶ್ರಮ ಮಠ
ಹೆಬ್ಬೂರು, ತುಮಕೂರು.

# ಪೀಠಿಕೆ

1947–62ನೇ ಇಸವಿಯ, ನಡುವೆ, ಮೈಸೂರು –ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲ– ಪ್ರಕಾಶಿಸಿರುವ 36 ಋಗ್ವೇದ ಸಂಹಿತಾ ಬೃಹತ್ ಪುಸ್ತಕ ಸರಣಿಗಳಲ್ಲಿ, ಮೊದಲ 30 ಪುಸ್ತಕಗಳು ಋಗ್ವೇದ ಸಂಹಿತಾ ಭಾಗವೇ ಆಗಿದೆ. ವಿದ್ವಾಂಸ ಮಂಡಲಿಯಿಂದ ಸಿದ್ಧಗೊಂಡು, ಆಸ್ಥಾನ ವಿದ್ವಾನ್ ಹೆಚ್.ಪಿ.ವೆಂಕಟರಾಯರಿಂದ ಸಂಪಾದಿತವಾದ, ಆ ಪುಸ್ತಕಗಳೇ, ಈ ಪುಸ್ತಕ 'ಋಗ್ವೇದ ಪರಿಚಯ'ಕ್ಕೆ ಆಧಾರ ಗ್ರಂಥಗಳು.

ಮಾನವರ ಬುದ್ಧಿ ವಿಕಾಸವಾಗುವುದು, ಜ್ಞಾನ ಉಪಲಬ್ಧವಾದಾಗಲೇ. ಜ್ಞಾನವಿಲ್ಲದ ಬುದ್ಧಿ ವ್ಯರ್ಥ. ಬುದ್ಧಿಯಿಂದ ಭಾಗ್ಯನಿರ್ಮಿಸಿಕೊಳ್ಳಬಹುದು.

ಋಷಿಗಳು, ಜ್ಞಾನ ಸ್ವರೂಪಿ ವೇದದ ದೃಷ್ಟಾರರು. ವೇದ, ಒಬ್ಬರು ರಚಿಸಿದ ಗ್ರಂಥವಲ್ಲ; ಇದೊಂದು ಗ್ರಂಥಗಳ ಸಮೂಹ.

ನಮ್ಮ ಪೂರ್ವಜರು 'ಋಷಿಗಳು', ಅವರುಗಳು ದೇವತೆಗಳೊಂದಿಗೆ ನೇರ ವ್ಯವಹರಿಸುತ್ತಿದ್ದರು, ಎನ್ನಲಾದವರು. ಆಗ, ಇಲ್ಲಿನ ರಾಜರುಗಳೂ, ಯುದ್ಧದಲ್ಲಿ, ದೇವತೆಗಳಿಗೆ ಸಹಾಯಮಾಡುತ್ತಿದ್ದರಂತೆ.

ಇಂತಹ ನಮ್ಮ ಪೂರ್ವಿಕರ ವಿಚಾರ ತಿಳಿಯಲು ಕಷ್ಟ, ಆದರೂ ಅವರ ಸಾಧನೆಗಳಿಂದ ಅವರುಗಳ ಪರಿಚಯವನ್ನು, ಸ್ವಲ್ಪವಾದರೂ, ಮಾಡಿಕೊಳ್ಳಬಹುದು.

ನಮ್ಮ ಹಿರಿಯರಾದ ಋಷಿಗಳ ಚರಿತ್ರೆ, ಸಾಧನೆಗಳು, ಜೀವನಕ್ರಮ, ಆಸೆ ಆಕಾಂಕ್ಷೆಗಳು –ಇತ್ಯಾದಿಗಳ ಪರಿಚಯ ಮಾಡಿಕೊಳ್ಳುವುದು –ರೋಚಕ ಕಾಂದಬರಿಗಳನ್ನು ಓದುವಷ್ಟು ಹಗುರವಾದ ಕೆಲಸವಲ್ಲ. ಅವರುಗಳ ಅನೇಕ ವಿಚಾರಗಳು ಗೂಡವಾದವು, ಗಾಢವಾದವು; ಸಾಮಾನ್ಯ ತಿಳಿವಳಿಕೆಗೆ ನಿಲುಕದಂತಹವುಗಳು. ಆದುದರಿಂದಲೇ ವೇದಗಳು 'ಪೂಜಾಗ್ರಂಥ'ಗಳಾಗಿ ಉಳಿದು 'ಬೇಸರ' ತರುವಂತಹವಾಗಿದೆ.

ಋಷಿಗಳು, ಅವರು ನಂಬಿದ್ದ ದೇವತೆಗಳಲ್ಲಿ ಇಟ್ಟಿದ್ದ ಭರವಸೆ, ದೃಡನಂಬಿಕೆ, ಶ್ರದ್ಧೆ, ಕಲ್ಪನೆ, ಆದೇವತೆಗಳ ಸಾಧನೆ ಬಗ್ಗೆ ಮೆಚ್ಚಿಗೆ –ಇವುಗಳು, ಋಷಿಗಳ ಮತ್ತು ದೇವತೆಗಳ ಸಂಬಂಧವನ್ನು ನಿಕಟಗೊಳಿಸಿದವು. ಆದ್ದರಿಂದಲೇ ಯಾವ ಹಿಂಜರಿಕೆಯೂ ಇಲ್ಲದಂತೆ, ದೇವತೆಗಳಲ್ಲಿ ಋಷಿಗಳು, ತಮ್ಮ ಆಸೆ ಆಕಾಂಕ್ಷೆಗಳನ್ನು ಮುಂದಿಡುತ್ತಿದ್ದರು.

ಋಷಿಗಳ ಅವಶ್ಯಕತೆಗಳೂ, ಆ ಪರಿಸರದಲ್ಲಿ ಸೀಮಿತವಾಗಿರುತ್ತಿದ್ದವು, ಅವನ್ನು ಪೂರೈಸಿಕೊಳ್ಳುವ ವಿಧಾನವೂ, ವಿಶೇಷ ರೀತಿಯದಾಗಿರುತ್ತಿದ್ದವು; ಈಗಿನ ಕ್ರಮಕ್ಕೆ ಹೋಲಿಕೆಯೇ ಇಲ್ಲದಂತಹ ಕ್ರಮಗಳು ಅವು.

ಋಷಿಗಳ ಆರಾಧ್ಯದೇವತೆಗಳು ಕೆಲವರೇ. ತಾವು ಕಂಡಿದ್ದ ಆ ದೇವತೆಗಳ ಗುಣಗಳನ್ನು ಹೊಗಳಿ ಹೊಗಳಿ, ವೈಭವೀಕರಿಸುವುದನ್ನು ಕಾಣುತ್ತೇವೆ.

ಗುಣಗಾನ ಮಾಡುವುದನ್ನೂ ಕಾಣುತ್ತೇವೆ. ಆ ಋಷಿಗಳು 'ಕಂದ' ರಚಿಸಿದ ಛಂದೋಬದ್ಧ ಸಾಹಿತ್ಯ ಅವರುಗಳ ಪ್ರೌಢತೆಗೆ ಸಾಕ್ಷಿ.

ಋಗ್ವೇದ ಪ್ರಥಮ ಮಂಡಲದ ಪ್ರಥಮ ಸೂಕ್ತದ, ಮಂತ್ರ –ದೃಷ್ಟ್ರ ಋಷಿ ಮಧುಚ್ಛಂದ ವಿಶ್ವಾಮಿತ್ರರು. ಇವರ, ಇವರನಂತರದ, ಸೂಕ್ತ–ಕರ್ತರ ಕೃತಿಗಳನ್ನು ಮೂರು ಸಾವಿರ ವರ್ಷಗಳ ಹಿಂದೆಯೇ, ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದಲೇ ಯಾಸ್ಕರು 'ನಿರುಕ್ತ' ರಚಿಸಿದರು. ಇನ್ನು ಈಗ ಲಭ್ಯವಿಲ್ಲದ, ಮದುಚ್ಛಂದರಿಗಿಂತ ಮುಂಚಿನ, ಸಾವಿರಾರು ಋಷಿಗಳ ಕೃತಿ ಹೇಗಿದ್ದೀತು!

'ಈ ಕೃತಿಗಳನ್ನು ಅರ್ಥಮಾಡಿಕೊಳ್ಳುವವರು, ಎಂದಾದರೂ, ಯಾರಾದರೂ, ಹುಟ್ಟುವರು' –ಎಂಬ ನಂಬಿಕೆಯಿಂದ ನಮ್ಮ ಹಿರಿಯರು ಇದ್ದಿರಬೇಕು. ಆದ್ದರಿಂದಲೇ, ಮೂಲದಲ್ಲಿ ಏನೂ ವ್ಯತ್ಯಾಸವಾಗದಂತೆ, ಲಯಬದ್ಧವಾಗಿ, ಬಾಯಿಪಾಠ ಮೂಲಕ, ಈವರೆವಿಗೂ ವೇದವನ್ನು ಅದೇ ಶುದ್ಧತೆಯಿಂದ ಉಳಿಸಿಕೊಂಡು ಬರುವ, ಉಪಕಾರ ಮಾಡಿದ್ದಾರೆ.

ಈಚಿನ ವರ್ಷಗಳಲ್ಲಿ, ನಿರ್ಮಾಣಗೊಂಡ ಅನೇಕ ಬೃಹತ್ ಸಾಹಿತ್ಯ ರಚನೆಗಳು ಕುಗ್ಗಿರುವುದನ್ನು, ಕೆಲವು ಮಾತ್ರಾ, 'ಘಟ್ಟಿ ಸಾಹಿತ್ಯ' ಮಾತ್ರಾ ಉಳಿದಿರುವುದನ್ನೂ ಕಾಣುತ್ತೇವೆ. ಆದರೆ ಆರು ಸಾವಿರ ವರ್ಷಗಳಿಗೂ ಹಿಂದಿನ ವೇದಗಳು, ಮೌಲ್ಯಯುಕ್ತವಾಗಿರುವುದರಿಂದಲೇ, ಇಂದಿಗೂ ಉಳಿದಿವೆ. ದೇವಭಾಷೆಯೂ, ಅನೇಕ ಬದಲಾವಣೆಗೊಂಡರೂ, ಮಾನವ ಭಾಷೆಯಾಗಿ ಉಳಿದಿದೆ.

ವಿದ್ವಾಂಸರ ಪ್ರೌಢತೆ, ಕಾಲಕಾಲಕ್ಕೆ ಇಳಿಮುಖವಾಗುತ್ತಿದೆ. ಕೆಲವೇ ದಶಕಗಳ ಹಿಂದೆ ಪ್ರಚಲಿತವಿದ್ದ ಮಾತೃಭಾಷೆಯೇ, ಈಗಿನವರಿಗೆ ಅರ್ಥವಾಗುವುದಿಲ್ಲ! –ಇದು ಸಾಮಾನ್ಯ ಅನುಭವ. ಆದುದರಿಂದಲೇ ಸಂಸ್ಕೃತ ಭಾಷೆ ತಿಳಿಯದವರಿಗೆ, ಸಾಮಾನ್ಯರಿಗೆ, ವೇದಗಳು ಜ್ಞಾನದಾಯಿಗಳಾಗದೇ –ಪೂಜಾಯೋಗ್ಯವಾಗಿ– ಇದ್ದಿರಬೇಕು.

ವಿಷಯ ಮಂಥನದಿಂದ, ಹೊಸ ಹೊಸ ರೀತಿಯಲ್ಲಿ, ಹೊಸ ಹೊಸ ವಿಚಾರಗಳು ಪ್ರಕಾಶಕ್ಕೆ ಬರಲು ಸಾಧ್ಯ. ಇದಕ್ಕೆ ತಾಳ್ಮೆಯುತ ಶ್ರಮ, ಅತೀ ಅವಶ್ಯಕ.

'ಋಗ್ವೇದ ಪರಿಚಯ' –ಇದು ಋಗ್ವೇದದ ಯಥಾವತ್ ವಸ್ತುನಿಷ್ಠ ಪರಿಚಯ ಮಾತ್ರಾ; ವ್ಯಾಖ್ಯಾನ, ಟೀಕೆ, ಅಭಿಪ್ರಾಯ ಅಥವಾ ಇನ್ನಾವುದೂ ಅಲ್ಲ. ಓದುಗರಿಗೆ ಋಗ್ವೇದದ ಪರಿಚಯ ಮಾಡಿಸುತ್ತಾ, ಅವರ ಜ್ಞಾನ ಭಂಡಾರವನ್ನು, ಆಳ ಮತ್ತು ವಿಸ್ತಾರ ಮಾಡಿಕೊಳ್ಳಲು ಪ್ರಚೋದಿಸುವುದೇ, ಈ ಕೃತಿಯ ಗುರಿ.

ಇಲ್ಲಿ ಬರುವ ವಿಷಯಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಅರ್ಥವಾದಷ್ಟನ್ನು ವಿವರಿಸುವುದೂ ಕಷ್ಟ. ಆಸಕ್ತರಿಗೆ ಸಮಾಧಾನವಾಗುವಂತೆ ಅರ್ಥವಿವರಿಸುವುದು ಇನ್ನೂ ಕಷ್ಟ. ಸೂಕ್ತಗಳ ಒಟ್ಟು ಅಭಿಪ್ರಾಯ ತಿಳಿಯಲು ಈ ಕೃತಿ ಸಾಕಾದೀತು; ಪೂರ್ಣಾರ್ಥವನ್ನಲ್ಲ.

ಪ್ರಯೋಗಿಸಿರುವ ಎಷ್ಟೋ ಪದಗಳು ಅರ್ಥವಾಗುವುದಿಲ್ಲ. ಆದುದರಿಂದ, 'ಈ ಕೃತಿಯಲ್ಲಿ ಬರೆದಿರುವುದೆಲ್ಲಾ ಲೇಖಕನಿಗೆ ಅರ್ಥವಾಗಿದೆ' ಎಂಬ ಭಾವನೆ ಇಟ್ಟುಕೊಳ್ಳದೆ 'ತಾನು ಅರ್ಥಮಾಡಿಕೊಳ್ಳುವ ಪ್ರಯತ್ನದಲ್ಲಿ, ಬೇರೆಯವರಿಗೂ ಪರಿಚಯ ಮಾಡಿಸುವ ಪ್ರಯತ್ನ ಇದು' –ಎಂದು ವಾಚಕರು ತಿಳಿದರೆ ಸಾಕು.

ಅನೇಕ ಸೂಕ್ತಗಳು ಸ್ತುತಿಗಳಂತೆ ಇಲ್ಲದಿದ್ದರೂ ಸ್ತುತಿಗಳೆಂದೇ ಇಲ್ಲಿ ಪರಿಗಣಿತ.

ತ್ರೇತಾಯುಗದಲ್ಲಿ ಶ್ರೀರಾಮನು ಅಶ್ವಮೇಧಯಾಗ ಮಾಡಿದ್ದು, ದ್ವಾಪರ ಯುಗದಲ್ಲಿ ಧರ್ಮರಾಜನ ರಾಜಸೂಯ ಯಾಗ ಮಾಡಿದ್ದು, ನಳಮಹರಾಜ ವೇದ ವಿದ್ಯೆ ಕಲಿತದ್ದು ಹೀಗೆ ಮತ್ತು ಅನೇಕವರ ಬಗ್ಗೆ ಸಂಶೋಧಿಸಿದ ವಿದ್ವಾಂಸರು ವೇದಕಾಲವನ್ನು ಸುಮಾರು ಕ್ರಿ.ಪೂ. ನಾಲ್ಕು ಸಾವಿರ ವರ್ಷಗಳು ಅಂದರೆ ಈಗ್ಗೆ ಸುಮಾರು ಆರು ಸಾವಿರ ವರ್ಷಗಳೆಂದು ಅಭಿಪ್ರಾಯ ಪಡುತ್ತಾರೆ. ವೇದ ವಿದ್ವಾಂಸರುಗಳು, 'ವೇದ ಅನಾದಿ ಬ್ರಹ್ಮ ಹೃದಯದಿಂದ ನಿಶ್ವಾಸ ರೂಪದಲ್ಲಿ ಬಂದದ್ದು' ಎಂದು ನಂಬುತ್ತಾರೆ.

ಈಗ ನಡೆಸುತ್ತಿರುವಂತೆ, ದೇವತೆಗಳಿಗೆ ಪೂಜಾದಿಗಳು, ಮನೆ, ದೇವಾಲಯಗಳಲ್ಲಿ, ಆಗ ಸಲ್ಲುತ್ತಿರಲಿಲ್ಲ. ದೇವತೆಗಳಿದ್ದ ಸ್ಥಳಕ್ಕೆ ಹವಿರಾಧಿಗಳನ್ನು ಒಯ್ಯುತ್ತಿರಲಿಲ್ಲ. ಯಾಗಮಂಟಪಕ್ಕೆ ಇಚ್ಛಿತ ದೇವತೆಗಳನ್ನು ಆಹ್ವಾನಿಸಿ, ಯಜ್ಞ ನೆರವೇರಿಸುತ್ತಿದ್ದರು. ಶ್ರೀಮಂತರಿಂದ ಸಾಧ್ಯವಾಗುತ್ತಿದ್ದ ಯಜ್ಞ, ಸಾಮಾನ್ಯರಿಗೆ ಸಾಧ್ಯವಾಗುತ್ತಿರಲಿಲ್ಲ. ಅದ್ದರಿಂದಲೇ ದೇವಾಲಯಗಳಲ್ಲಿ, ಮನೆಗಳಲ್ಲಿ ಪೂಜಾಪದ್ಧತಿ ಸಾಧ್ಯವಾಗುವಂತಾಗಿರಬೇಕು, ಆರಂಭವಾಗಿದ್ದಿರಬೇಕು.

ನಮ್ಮ ಹಿರಿಯರು, ಸಂಸಾರ–ಸುಖ, ಸ್ವರ್ಗಸುಖ, ಅಪೇಕ್ಷಿಗಳಾಗಿದ್ದರು. ಸುಖ ಅನುಭವಿಸುವುದೇ ಅವರ ಗುರಿ. ಶಕ್ತ ಪುತ್ರ ಪೌತ್ರರನ್ನು ಪಡೆವುದು, ಪದೇ ಪದೇ ನಡೆಯುತ್ತಿದ್ದ ಯುದ್ಧದಲ್ಲಿ ಶತ್ರುನಾಶ ಮಾಡುವುದೇ, ಅವರ ಗುರಿಗಳಾಗಿದ್ದವು.

ವೇದಾರ್ಥ ತಿಳಿದವರಲ್ಲಿ ದೇವತೆಗಳು ವಾಸಿಸುತ್ತಾರೆ. ಅರ್ಥತಿಳಿಯದಿದ್ದರೂ, ಕಂಠಪಾಠ ಮಾಡಿದವರು, –ಹೆಚ್ಚಿನ ಲಾಭಪಡೆಯದಿದ್ದರೂ,– ಪತಿತರಾಗುವುದಿಲ್ಲ. ಮಾನವ ಸ್ತೋತ್ರದಿಂದ, ದೇವತೆಗಳ ಬಲವೃದ್ಧಿಯಾಗುತ್ತದೆ. ಪುರುಷರು, ತಮ್ಮ ಶ್ರೇಯಸ್ಸಿಗಾಗಿ ಮಾಡಲೇಬೇಕಾದ, ತಿಳಿಯಲೇಬೇಕಾದ, ಕರ್ತವ್ಯ ಕರ್ಮಗಳನ್ನು, ವೇದ ತಿಳಿಸುತ್ತದೆ. ಅಚೇತನವಾದ ಗ್ರಾವಗಳು, ಉಲೂಕ, ಯೂಪಸ್ತಂಭಗಳಲ್ಲೂ ದೇವತ್ವ ಇದೆ. ತಾವು ನಂಬಿದ ದೇವನೇ ದೊಡ್ಡವನು –ಎಂಬೆಲ್ಲಾ ಭಾವನೆಗಳೂ ಋಷಿಗಳಲ್ಲಿದ್ದವು.

ಈಗ ಪ್ರಚಲಿತ ಇರುವ, ದೇವತೆಗಳಾಗಲೀ, ಗ್ರಹಗಳಾಗಲೀ, ಆಗ ಪ್ರಚಲಿತ ಇರಲಿಲ್ಲ. ಈಗ, ದೇವೋಪಾಸನೆಗೆ ಉಪಯೋಗಿಸುವ, ಋಙ್ಮಂತ್ರಗಳ ಅರ್ಥ, ವಿನಿಯೋಗಗಳಿಗೆ, ಹೊಂದಿಕೆಯಾಗುವುದಿಲ್ಲ. ಮಂತ್ರಗಳು 'ಶಬ್ದಪ್ರಧಾನ' ಅರ್ಥಪ್ರಧಾನವಲ್ಲ.

ಈಗಿನ ಸಮಾಜಕ್ಕೆ –ಕ್ರೂರ ಅಶ್ಲೀಲ– ಎನ್ನಿಸುವ ಅನೇಕ ವಿಚಾರಗಳು, ಆಗ ನಿತ್ಯಜೀವನ ಕ್ರಮವಾಗಿದ್ದಿರಬೇಕು. ಕ್ರೂರ ತಂದೆ ಮಗನ ಕಣ್ಣು ಕೀಳಿಸುವುದು,

ವಿರಸದಲ್ಲಿದ್ದರೂ ಬೇರೆ ರೂಪ ತಾಳಿ, ಕಾಮೇಚ್ಛೆ ಪೂರೈಸಿಕೊಳ್ಳುವುದು, ಮರಣಾವಸ್ಥೆಯಲ್ಲೂ ಧನ ಯಾಚಿಸುವುದು, ಇಂತಹವು ಅನೇಕವಿವೆ.

'ಮಿತ್ರನ, ಶತ್ರುವಿನ ಧನವೂ ಬೇಡ' ಎನ್ನುವವರಿದ್ದಂತೆ, ಶತ್ರುಧನಾಪೇಕ್ಷಿ ಋಷಿಗಳೂ ಇದ್ದರು. ಉಷೆಯು ಸೂರ್ಯನ ಪುತ್ರಿಯೇ? ಕಕ್ಷೀವಂತನ ಜನನ ಹೇಗೆ ಆಯಿತು? ಇಂದ್ರವಾಮದೇವರ ಜನನ, ಇಂದ್ರನ ಅವಗುಣಗಳು –ಇಂತಹ ಕಿರಿಕಿರಿ ತರುವ ವಿಚಾರಗಳೂ ಬಹಳ ಇವೆ.

ಅರವತ್ತು ವರ್ಷದ ಕನ್ಯೆಗೆ ಮದುವೆ, ಸ್ತ್ರೀಯರು ಪಿಂಡಪ್ರದಾನ ಮಾಡುವುದು, ಸ್ವಚ್ಛಂದ ಕಾಮಪ್ರಕಟಣೆ –ಇತ್ಯಾದಿಗಳೆಲ್ಲಾ ಆ ಕಾಲಕ್ಕೆ ಸರಿಯಿದ್ದೀತು. ವಿಧವಾ ವಿವಾಹ ಈಗೀಗ ನಮ್ಮಲ್ಲಿಯೂ ಪ್ರಚಲಿತ. ಧನಲಾಭಕ್ಕೆ ನ್ಯಾಯಾಲಯಕ್ಕೆ ಹೋಗುವುದು, ಮಾಂಸಾಹಾರ, ಸೋಮಪಾನ, 'ಗಂಡನ ಮನೆಯಲ್ಲಿ ಅಧಿಕಾರ ಮಾಡಿಕೊಂಡಿರು'ವುದು –ಈಗಿನ ಸಂಸ್ಕೃತಿಯೇನಲ್ಲ.

ಭಾಷಾಚಾತುರ್ಯದಿಂದ, ದೇವತೆಗಳನ್ನು ಹೊಗಳಿ, (ಬೈಯುವುದೂ ಉಂಟು) ಸುಲಭ ಸಾಧ್ಯರನ್ನಾಗಿಸಿಕೊಂಡು, ಅವರ ಕಾರ್ಯ ಸಾಧಿಸಿಕೊಳ್ಳುತ್ತಾ, ಋಷಿಗಳು ಸುಖವಾಗಿದ್ದಿರಬೇಕು. ಸೋಮಪಾನದ ದೌರ್ಬಲ್ಯದಿಂದ ದೇವತೆಗಳೂ, ಋಷಿಗಳ ಕೈವಶವಾಗುತ್ತಿದ್ದಿರಬೇಕು.

ದೇವತೆಗಳಲ್ಲೂ ತಾರತಮ್ಯ ತೋರಿರುವುದನ್ನು ಗಮನಿಸಬಹುದು. ಇಂದ್ರ, ಮರುತ್ತುಗಳು, ಋಭುಗಳು ಸಮಾನರೇನಲ್ಲ.

ಯಾವ ವೃದ್ಧಾಪ್ಯದಲ್ಲಿ, ನಮ್ಮ ಪುತ್ರರು, ನಮ್ಮನ್ನು ರಕ್ಷಿಸ ಬೇಕಾಗುವುದೋ, ಅಂತಹ ಮುಪ್ಪು ಉಂಟಾಗದಿರಲಿ –ಋಷಿಯ ಈ ಪ್ರಾರ್ಥನೆಯ ಅರ್ಥ ಏನು? ಹೀಗೆಲ್ಲಾ ಪರಿಚಯಿಸುತ್ತಾ 'ಋಗ್ವೇದ ಪರಿಚಯ' ಮುಂದುವರೆಯುತ್ತದೆ.

ಋಗ್ವೇದ ಪರಿಚಯ ಪ್ರಥಮ ಮಂಡಲ ಮುಂದುವರೆದು ದ್ವಿತೀಯ, ತ್ರಿತೀಯ, ಚತುರ್ಥ ಮಂಡಲ ಪರಿಚಯವು, ತಮ್ಮ ಕೈಸೇರಲು ಶ್ರಮಿಸಿದವರಿಗೆಲ್ಲಾ ಕೃತಜ್ಞತೆಗಳು. ರಾಷ್ಟ್ರಪ್ರಶಸ್ತಿ ಸನ್ಮಾನಿತ ಆಸ್ಥಾನ ವಿದ್ವಾನ್ ಕೋಡೂರು ಕೃಷ್ಣ ಜೋಯಿಸರ ಸಲಹೆ ಸಹಕಾರಗಳಿಗೆ ಕೃತಜ್ಞತೆಗಳು.

ಪುಸ್ತಕ 'ಋಗ್ವೇದ ಪರಿಚಯ'ದ ಪ್ರಕಟಣೆಗೆ, ಆರ್ಥಿಕವಾಗಿ ನೆರವಾಗಿನಿಂತ, ತಿರುಪತಿ ತಿರುಮಲ ದೇವಸ್ಥಾನದ ಆಡಳಿತ ವರ್ಗಕ್ಕೆ ಕೃತಜ್ಞತೆಗಳು.

ತಾ: 05.07.1997 ಸೂರ್ಯನಾರಾಯಣ

ಬೆಂಗಳೂರು

# ಮಂಡಲ - 2 (ಸೂಕ್ತಗಳು 1 ರಿಂದ 43 ರವರೆಗೆ)

## (ಅಷ್ಟಕ 2 - ಅಧ್ಯಾಯ 5 ಮುಂದುವರೆದದ್ದು ಅಧ್ಯಾಯ 8 ಭಾಗಶಃವರೆಗೆ)

### ಸೂಕ್ತ - 1 (ತ್ವಮಗ್ನೇ ದ್ಯುಭಿಃ.....

ಋಷಿ ಗೃತ್ಸಮದ ಆಂಗೀರಸಃ ಶೌನಹೋತ್ರಃ ಪಶ್ಚಾದ್ಭಾರ್ಗವಃ ಶೌನಕರು ಅಗ್ನಿದೇವನನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಕಲರ ಪೋಷಕ. ಸಕಲ ಕರ್ಮಪ್ರೇರಕ. ಸುಖಕ್ಕೆ ಆವಾಸಭೂತ. ಮರುತ್ತುಗಳ ಸಂಘಾತಶಕ್ತ, ಶ್ರೇಷ್ಠ ಅಶ್ವಫಲದಾತ, ಯಜ್ಞಗೃಹದಲ್ಲಿ ಉಪಚರಿತ ಯಜ್ಞಸಾಧಕ ಹಾಗೂ ಯಜ್ಞಫಲದಾತೃ.

ಪ್ರತ್ಯಕ್ಷನಾಗಿ ಪೂಜಿತನಾಗುವ ಅಗ್ನಿ, ಯಜಮಾನನಿಗಾಗಿ ಹವಿಸ್ಸು ಕಾಷ್ಠಾದಿಗಳನ್ನು ದಹಿಸುತ್ತಾನೆ. ಪೋಷಕನಾದಾಗ ಅಗ್ನಿಯು ಸಂಪಾದಕನಾಗಿ, ಇಷ್ಟಾರ್ಥ ಸಾಧಿಸಿಕೊಡುತ್ತಾನೆ. ಶತ್ರುಗಳನ್ನೂ, ಪಾಪಾದಿಗಳನ್ನೂ ದಹಿಸುವ, ಪಾಪಾದಿದಾಟಿಸುವವ ಅಗ್ನಿಯೇ.

ದರ್ಶನೀಯ ಸ್ವರೂಪದಲ್ಲಿ, ಧನ ಐಶ್ವರ್ಯವಂತ ಅಗ್ನಿಯು, ಉಪಚರಿಸುವ ಯಜಮಾನರನ್ನು, ಮನಃಪೂರ್ವಕವಾಗಿ ಕಾಪಾಡುತ್ತಾನೆ. ಲತಾದಿಗಳ ಗರ್ಭರೂಪಿಯಾಗಿ ಸಸ್ಯಾದಿಗಳನ್ನು ಉತ್ಪನ್ನ ಮಾಡುವ ಅಗ್ನಿಯ ಸಹಾಯದಿಂದಲೇ, ಮಾನವನು ರಸರೂಪಿ ಅನ್ನವನ್ನು ತಿನ್ನುವುದು.

ಯಾಗದಿನಗಳಲ್ಲಿ, ಯಾಗಕ್ಕೋಸ್ಕರವೇ, ಉದಕಪಾಷಾಣದಿಗಳಿಂದ, ಅಗ್ನಿಯು ಉತ್ಪನ್ನನಾಗುತ್ತಾನೆ.

ಯಜ್ಞಾರ್ಪಿತ ಅನ್ನವು ಮೊದಲು ಅಗ್ನಿಗೇ ಅಧೀನ. ನಂತರ ದ್ಯಾವಾಪೃಥ್ವಿ ಹಾಗೂ ದೇವತೆಗಳಿಗೆ ಹಂಚುವ ಸಾಹಸ ಮಾಡುತ್ತಾನೆ.

ಹವಿಸ್ಸನ್ನು ಹೊಂದಿರದ ದೇವತೆಗಳು ಅಗ್ನಿಯನ್ನು ಯಜ್ಞದಲ್ಲಿ ಸೇವಿಸುತ್ತಾರೆ. ಇಂದ್ರಾದಿದೇವತೆಗಳಿಗಾಗಿ ಅಗ್ನಿಯು, ರುಚಿನೋಡುವವನಾಗಿ, ತನ್ನ ಮುಖದಲ್ಲೇ ಹವಿಸನ್ನು ಭಕ್ಷಿಸುತ್ತಾನೆ.

ಆದಿತ್ಯರೂಪದಲ್ಲಿ ಪವಿತ್ರಾಗ್ನಿಯಾಗಿ, ವೃಕ್ಷಗಳಲ್ಲಿ ದಾವಾನಲನಾಗಿ, ಓಷಧಿಗಳಲ್ಲಿ ವೈಶ್ವಾನರನಾಗಿ, ಯಜ್ಞಗೃಹದಲ್ಲಿ ಗೃಹಪತಿಯಾಗಿ, ಯಜಮಾನನಿಗೆ ಅಗ್ನಿಧ್ರ, ಅಧ್ವರ್ಯು ಹಾಗೂ ಬ್ರಹ್ಮನಾಗಿಯೂ ಅಗ್ನಿಯು ಇದ್ದಾನೆ.

ಇಷ್ಟಾರ್ಥಪ್ರದ ಇಂದ್ರ, ನಮಸ್ಕಾರಾರ್ಹ ವಿಷ್ಣು, ಧನವಂತ ಭಗವಂತ ಅಗ್ನಿಯೇ, ಧೃವವ್ರತಿ ವರುಣ, ಶತ್ರುನಾಶಕ ಮಿತ್ರ, ದಾನ ಕಾರಣ ಆರ್ಯಮ, ಅಂಶು ಎಲ್ಲಾ ಅಗ್ನಿಯೇ.

ಹೋತ್ರ, ನೇತ್ರ, ನೇಷ್ಟ್ರ, ಪ್ರಶಾಸ್ತಗಳಿಗೆ ಸೇರಿದ ಕಾರ್ಯಮಾಡುವವ, ಯಜ್ಞದಲ್ಲಿ ಸತ್ಫಲ ಹಂಚುವವ ಅಗ್ನಿಯೇ.

ಪ್ರಾಣಪಾಲಕಳಾದ ಅದಿತಿ, ಆದಿತ್ಯ ಸಂಬಂಧಿ ಭಾರತಿ, ನಿತ್ಯಳಾದ ಇಳಾ, ವಾಯು ಸಂಬಂಧಿ ಸರಸ್ವತಿ, ಹೋತೃ ಎಲ್ಲಾ ಅಗ್ನಿಯೇ.

ಯಜಮಾನ ಋತ್ವಿಕಾದಿಗಳಿಗೆ ಅಶ್ವ, ಗೋ, ಧನ, ಪುತ್ರಾದಿಗಳನ್ನೂ ದಾನಮಾಡುವ ಅಗ್ನಿಯು, ಸ್ವರ್ಗಾದಿವಾಸಕ್ಕೂ ಕರೆದೊಯ್ಯಲಿ. ಯಜಮಾನನೊಡನೆ ಬಂಧುತ್ವ ಪಾಲಿಸುತ್ತಾ ಯಜಮಾನರನ್ನು ಕರ್ತವ್ಯಕ್ಕೆ, ಶೀಘ್ರವಾಗಿ ಪ್ರೇರಿಸಲಿ.

**ಸೂಕ್ತ - 2 (ಯಜ್ಞೇನ ವರ್ಧತ ಜಾತವೇದಸಮಗ್ನಿಂ.....**

ಋಷಿ ಗೃತ್ಸಮದರು ಅಗ್ನಿದೇವನನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಶುಭದರ್ಶನ ಉಳ್ಳವ, ದ್ಯಾವಾಪೃಥ್ವಿಗಳ ಪ್ರಭು, ಸರ್ವತ್ರಸಂಚಾರಿ, ಚೈತನ್ಯಕಾರಿ ರಕ್ಷಕ, ವೃಷ್ಟಿಸುರಿಸುವವ, ಶ್ರೇಷ್ಠಯಾಗ ಉಳ್ಳವ, ಮಾನವರಲ್ಲೇ ಅತ್ಯಂತಸ್ತುತ್ಯ. ಪ್ರಜೆಗಳ ಸ್ವಾಮಿ, ಅತಿಥಿಯಂತೆ ಪೂಜ್ಯ.

ರಾತ್ರಿಯಕಾಲದಲ್ಲಿ ಅತಿಶಯ ಪ್ರಕಾಶಿಯಾಗಿರುವ ಅಗ್ನಿಯು, ದ್ಯುಲ್ಲೋಕದಂತೆ ವಿಸ್ತೃತವಾದ ಅಂತರಿಕ್ಷದಲ್ಲಿ, ಚಿನ್ನದಕಾಂತಿಯಿಂದ ಸಂಚರಿಸುತ್ತಾ ದ್ಯಾವಾಪೃಥ್ವಿಗಳನ್ನು ಚೈತನ್ಯಯುಕ್ತವಾಗಿ ಮಾಡುತ್ತಾನೆ. ಯಜಮಾನನ ಶರೀರ ಶಕ್ತಿ ವೃದ್ಧಿಗೊಳಿಸುತ್ತಾ ಸ್ವರ್ಗಕ್ಕೆ ಒಯ್ಯುವ ಹೋಮಸಂಪಾದಕ ಅಗ್ನಿಯೇ.

ನಿಯಮಿತ ವ್ಯವಹಾರಿಯಾದ ಅಗ್ನಿಯು, ಹವಿಸ್ಸನ್ನು ವಹಿಸುವುದರಿಂದ, 'ರಥ' ಎಂದು ತಿಳಿಯಲ್ಪಡುತ್ತಾನೆ. ಉಷಃಕಾಲವು ಬೆಳಗುವಂತೆ, ದ್ಯಾವಾಪೃಥ್ವಿಗಳು ನಮಗೆ ಅನುಕೂಲವಾಗುವಂತೆ, ಆದಿತ್ಯನು ಜಗತ್‌ಪ್ರಕಾಶಮಾಡುವಂತೆ ಮಾಡುವವ, ಅಗ್ನಿಯೇ.

ಪ್ರಕಾಶಮಾನ ದೇವತೆಗಳ ಮಧ್ಯೆ ಪ್ರಕಾಶಮಾನನಾಗಿ, ಯಾಗಗೃಹದಲ್ಲಿ ಅಗ್ನಿಯು ಸ್ಥಾಪಿತನಾಗುತ್ತಾನೆ. ದಟ್ಟವಾದ ಪೊದೆಗಳನ್ನು ದಹಿಸುತ್ತಾ, ಯಜಮಾನರ ಯೋಗಕ್ಷೇಮಕ್ಕಾಗಿ, ಯಾಗ ಸುತ್ತುವರಿದು ಪ್ರಜ್ವಲಿತನಾಗುತ್ತಾನೆ.

ಮಾನವ ಯಜಮಾನರು, ಹಗಲಿರುಳೂ ಅಗ್ನಿ ಸಾನ್ನಿಧ್ಯ ಅಪೇಕ್ಷಿಸಿ, ಮಹತ್ವಪೂರಿತ ಶ್ರೇಷ್ಠ ಸ್ತೋತ್ರ ಮಂತ್ರಗಳನ್ನು ಅರ್ಪಿಸಿ, ಹವಿಸ್ಸಿಂದ ಅಲಂಕರಿಸಿ ಪ್ರಬುದ್ಧನನ್ನಾಗಿ ಮಾಡುತ್ತಾರೆ.

ಅಗ್ನಿಯು ಯಾಗವನ್ನು ಸುತ್ತುವರಿದು ನಿಲ್ಲಲಿ; ಸ್ತೋತ್ರಗಳನ್ನು ತಿಳಿಯಲಿ, ಅರ್ಪಿತ ಹವಿಸ್ಸನ್ನು ಭಕ್ಷಣ ಯೋಗ್ಯವನ್ನಾಗಿ ಮಾಡಲಿ.

ಅಗ್ನಿಯ ಸೇವೆಯಲ್ಲಿರುವವರಿಗೆ, ಇತರರು ಪಡೆಯಲು ಅಸಾಧ್ಯವಾದ ಧನ, ಸೂರ್ಯನಂತೆ ಪ್ರಕಾಶ, ಅತಿಶಯ ಆಹ್ಲಾದ, ಶ್ರೇಷ್ಠಪುತ್ರರು, ನಿವಾಸ, ಗೋವು, ಭೃತ್ಯರನ್ನು ಕೊಡಲಿ.

ಇಷ್ಟಾರ್ಥ ನೆರವೇರಿಸಲ್ಪಟ್ಟ ಯಜಮಾನರು ಸಮೃದ್ಧಿ ಪ್ರೇರಿತರಾಗಿ, ಸ್ತುತಿಕರ್ತರಿಗೆ ಅಶ್ವಧನ ದಾನ ಮಾಡುತ್ತಾರೆ.

**ಸೂಕ್ತ - 3 (ಸಮಿದ್ಧೋ ಅಗ್ನಿರ್ನಿಹಿತಃ.....**

ಋಷಿ ಗೃತ್ಸಮದ (ಆಂಗಿರಸಃ ಶೌನಹೋತ್ರಃ ಪಶ್ಚಾತ್) ಭಾರ್ಗವ ಶೌನಕಃ (ಅಪ್ರೀ ಸೂಕ್ತಂ)

ದೇವತಾ – ಇಧ್ಮಃ ಸಮಿದ್ಧೋಗ್ನಿರ್ವಾ:, ನರಾಶಂಸಃ, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯೌ ಹೋತಾರೌ ಪ್ರಚೇತಸೌ, ತಿಸ್ರೋ ದೇವ್ಯಃ, ಸರಸ್ವತೀಳಾ ಭಾರತ್ಯಃ, ತ್ವಷ್ಟಾ ವನಸ್ಪತಿಃ ಸ್ವಾಹಾಕೃತಯಃ.

ಛಂದಃ – ತ್ರಿಷ್ಟುಪ್ ಜಗತೀ

ಅಗ್ನಿಯು, ಹೋಮ ಸಂಪಾದಕ, ಶುದ್ಧಿಕಾರಕ, ಪುರಾತನ, ಶ್ರೇಷ್ಠ ಪ್ರಜ್ವಲಿಯುವ, ಪ್ರಜ್ವಲಿತ ವೇಧಿರೂಪಿ, ಮಹದ್ಗುಣಿ, ಯಾಗಾರ್ಹ, ಸಕಲ ಭೂತಜಾತಗಳೂ ಅಗ್ನಿಯ ಸಮೀಪದಲ್ಲಿವೆ.

ನರಾಶಂಸ ಅಗ್ನಿಯು, ಶ್ರೇಷ್ಠ ಜ್ವಾಲೆಯುವ, ತ್ರಿಲೋಕಗಳನ್ನೂ ಪ್ರಕಾಶಗೊಳಿಸುವವ, ಹವಿಸ್ಸನ್ನು ಸ್ನಿಗ್ಧಮಾಡುವವ, ಹೋಮಕಾಲದಲ್ಲಿ ದೇವತೆಗಳನ್ನು ತೃಪ್ತಿಪಡಿಸಲಿ.

ಯಜಮಾನನಿಂದ ಸ್ತುತಿಸಲ್ಪಟ್ಟ ಯಾಗ ಯೋಗ್ಯ ಅಗ್ನಿಯು, ಪ್ರೀತಿಯಿಂದ, ಹೋತೃವಿಗಿಂತ ಮುಂಚೆಯೇ ಯಾಗಾರ್ಹ ದೇವತೆಗಳನ್ನುದ್ದೇಶಿಸಿ, ಯಾಗಮಾಡಲಿ. ಮರುತ್ತುಗಳು ಇಂದ್ರನನ್ನು ಕರೆತರಲಿ, ಋತ್ವಿಜರು ಇಂದ್ರನನ್ನು ಪೂಜಿಸಲಿ.

ವಿಶ್ವೇದೇವತೆಗಳೂ, ಆದಿತ್ಯರೂ ಯಜ್ಞಾರ್ಹವಸ್ತುಗಳೂ, ದೇವತಾತ್ಮ ಬರ್ಹಿಯ ಮೇಲೆ ಕುಳಿತುಕೊಳ್ಳಲಿ. ಬರ್ಹಿಯು ಯಜಮಾನನ, ಸಂಪತ್ತು ವೃದ್ಧಿಸಲಿ.

ಮಹಾನದ್ವಾರ ದೇವತೆಗಳು ಸುಲಭಸಾಧ್ಯರು, ಅಹಿಂಸಕ ವೀರಪುತ್ರರನ್ನೂ ಯಶಸ್ವಿಸಂಪತ್ತನ್ನೂ ಕೊಡುವವರು ಪೂರ್ಣವಾಗಿತೆರೆಯಲಿ, ಸ್ತುತಿಸಲ್ಪಡಲಿ.

ಅಹೋರಾತ್ರಿ ದೇವತೆಗಳು, ಇಷ್ಟಾರ್ಥ ಸುರಿಸುವ ಪುರಾತನ ಫಲದಾಯಿಕೆಯರು. ಯಜಮಾನನ ಕರ್ಮಗಳು, ಪರಸ್ಪರ ಅನುಕೂಲವಾಗಿರುವಂತೆ ಯಜ್ಞನಿರ್ವಹಿಸಲಿ.

ದೈವ್ಯಾಹೋತಾರರು ಅಗ್ನಿಯ ಎರಡುರೂಪರು, ಮುಖ್ಯಯಜ್ಞಾರ್ಹರು, ಶ್ರೇಷ್ಠಪ್ರಾಜ್ಞರು, ಉತ್ತಮ ದೇಹವಂತರು. ದೇವತೆಗಳನ್ನು ಯಜ್ಞಕ್ಕೆ ಕರೆದು, ನ್ಯೂನರಹಿತ ಮಂತ್ರಗಳಿಂದ ಪೂರ್ಣಯಜ್ಞ ಮಾಡುವವರು, ಪೃಥ್ವಿಯ ನಾಭಿರೂಪಿ ಉತ್ತಮ ವೇದಿಯ ಉಚ್ಚಪ್ರದೇಶದಲ್ಲಿ ಒಟ್ಟಿಗೆ ಪೂಜಿಸಲ್ಪಡಲಿ.

ಸರಸ್ವತಿಯು ಬುದ್ಧಿಯನ್ನು ಪರಿಷ್ಕರಿಸುವವಳು. ಇಳೆಯು ದೇವತಾತ್ಮಳು. ಭಾರತಿಯು ಸರ್ವಶ್ರೇಷ್ಠಳು. ಇವರುಗಳು ಹವಿಸ್ಸನ್ನು ಸ್ವೀಕರಿಸಿ, ಯಾಗಛಿದ್ರವಾಗದಂತೆ ರಕ್ಷಿಸಲಿ.

ದೇವಸಂಬಂಧಿ ಅನ್ನವನ್ನು ತ್ವಷ್ಟನು ಒದಗಿಸಲಿ.

ಯೂಪಾಭಿಮಾನಿದೇವತೆಗಳು ಸಮೀಪದಲ್ಲೇ ಇದ್ದು ಯಜಮಾನನ ಕರ್ಮ ಅನುಮೋದಿಸಲಿ. ಅಗ್ನಿಯು ಪಶುರೂಪ ಹವಿಸ್ಸನ್ನು ದೇವತೆಗಳಿಗಾಗಿ ಛೇದಿಸಿ ಸಂಸ್ಕರಿಸಲಿ,

ಆಜ್ಯವು ಫಲದಾಯಕ. ಅಗ್ನಿ ಉತ್ಪತ್ತಿಕಾರಕ. ತೇಜಸ್ಸುಗಳ ಆಧಾರವಾದ ಹವಿಸ್ಸುಗಳಿಗಾಗಿ ದೇವತೆಗಳನ್ನು ಕರೆತಂದು, ತೃಪ್ತಿಗೊಳಿಸಿ, ಸ್ವಾಹಾಕಾರ ಹವಿಸ್ಸನ್ನು ವಹಿಸಲಿ.

ವಂಶಬಂಧಕನಾದ, ಆಕರ್ಷರೂಪಿ ಶ್ರೇಷ್ಠಯಜ್ಞನಿರ್ವಾಹಕ, ಅನ್ನವಂತ ಕರ್ಮನಿರತ ಗುಣವಂತ ಪೌರುಷಿ ದೇವಾಪೇಕ್ಷಿ ಪುತ್ರನು ಯಜಮಾನನಿಗೆ ಉತ್ಪನ್ನನಾಗಲಿ.

**ಸೂಕ್ತ - 4 (ಹುವೇ ವಃ ಸುದ್ಯೋತ್ಮಾನಂ.....**

ಸೋಮಾಹುತಿ ಭಾರ್ಗವ ಋಷಿಗಳು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಭೃಗುಋಷಿಗಳು ಅಗ್ನಿಯನ್ನು ಒಮ್ಮೆ ಅಂತರಿಕ್ಷದಲ್ಲಿ, ಒಮ್ಮೆ ಪೃಥ್ವಿಯಲ್ಲಿ ಆವಿರ್ಭೂತನಾಗುವಂತೆ ಮಾಡಿದರು. ದೇವತೆಗಳು ಸ್ವರ್ಗಕ್ಕೆ ಹೋಗುವಾಗ ಅಗ್ನಿಯನ್ನು ಮಾನವರಲ್ಲಿ ಸ್ಥಾಪಿಸಿದರು. ಸಕಲರಾತ್ರಿಗಳಲ್ಲೂ ಪ್ರಕಾಶಿಸುವ ಅಪೇಕ್ಷಿತ ಅಗ್ನಿಯು ಹವಿಸ್ಸನ್ನು ಅರ್ಪಿಸುವ ಯಜಮಾನರಲ್ಲಿ ಸ್ಥಿರವಾಗಿದ್ದು, ಅವನನ್ನು ಸಂಪತ್ತು ಸಮೃದ್ಧನನ್ನಾಗಿ ಮಾಡುತ್ತಾನೆ.

ಮಾನವರಿಂದ ದೇವತೆಗಳವರೆಗಿನ, ಪ್ರಜೆಗಳನ್ನೆಲ್ಲಾ, ಸಖರಂತೆ ಕಾಣುವ, ಕಾಪಾಡುವ ಅಗ್ನಿಯು ರಮಣೀಯವಾಗಿ, ಅಂತರಿಕ್ಷ ಸೂರ್ಯನಂತೆ ಪ್ರಕಾಶಿಸುತ್ತಾನೆ.

ಅಗ್ನಿಯು ಪೃಥ್ವಿಯಲ್ಲಿ ಜ್ವಾಲೆಗಳಿಂದ ಪ್ರಸರಿಸುತ್ತಾ, ಸ್ತುತಿ, ಹವಿಸ್ಸು, ಆಜ್ಯಗಳಿಂದ ಪುಷ್ಟಿಗೊಂಡು ಪ್ರಕಾಶಿಸುತ್ತಾ, ಜೀರ್ಣಕಾಲದಲ್ಲಿ ಆಹುತಿ ಆಜ್ಯದಿಂದ ತರುಣನಾಗುತ್ತಾನೆ, ನಿಯಮರಹಿತನಾಗಿ, ಕಂಟಕಾದಿಗಳನ್ನು ದಹಿಸಿ, ವಿಕಾರಮಾಡುತ್ತಾ, ವೃಕ್ಷತರುಗುಲ್ಮಾದಿಗಳ ರಸಹೀರಿ, ವ್ಯಥೆ ಉಂಟುಮಾಡುತ್ತಾ, ದಾಹಗೊಂಡವನಂತೆ ವೇಗವಾಗಿ ವನವನ್ನು ದಹಿಸುತ್ತಾ ಕಪ್ಪಾಗಿಸಿ, ಶಬ್ದಮಾಡುತ್ತಾನೆ.

ಅಗ್ನಿಯನ್ನು ಯಜಮಾನರ ಪರವಾಗಿ ಋಷಿಆಹ್ವಾನಿಸುತ್ತಾನೆ. ಅಗ್ನಿಯು ಯಜಮಾನರಲ್ಲಿ ಸ್ಥಿರವಾಗಿದ್ದು ಸಂಪತ್ತು ಸಮೃದ್ಧನನ್ನಾಗಿ ಮಾಡುತ್ತಾನೆ.

ಅಗ್ನಿಯು, ವಿರೋಧಿಗಳಾದವರನ್ನು ಸೋಲಿಸಿ ಪೂರ್ಣನಾಶಪಡಿಸಲಿ. ಸ್ತುತಿಸುವವರಿಗೆ ಶತ್ರು ಸದೆಬಡಿವ ಶಕ್ತಿಕೊಡಲಿ, ಯಜ್ಞಕರ್ತರಿಗೆ ಪ್ರಸಿದ್ಧ ಅನ್ನ ಕೊಡಲಿ –ಎಂದು ಯಜಮಾನನ ಪ್ರಾರ್ಥನೆ.

**ಸೂಕ್ತ - 5 (ಹೋತಾಜನಿಷ್ಟ ಚೇತನಃ ಪಿತಾ.....**

ಸೋಮಾಹುತಿಭಾರ್ಗವ ಋಷಿಗಳು ಅಗ್ನಿದೇವನನ್ನು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಮೂಲಭೂತನಾದ ಅಗ್ನಿಯು ಹೋತೃಗಳ ಕರ್ಮದೊಡನೆ ಉತ್ಪನ್ನನಾದವ. ಮಾನವ ಹೋತೃವಂತೆ ಕಾರ್ಯನಿರ್ವಹಿಸುವ ಅಗ್ನಿಯನ್ನು ಸಪ್ತಹೋತೃಗಳು ಸ್ಥಾಪಿಸಿದ್ದಾರೆ.

ಚಕ್ರದ ಹೊರಪಟ್ಟಿಯಂತೆ, ಎಲ್ಲವನ್ನೂ ವ್ಯಾಪಿಸಿರುವ ಅಗ್ನಿಯು, ಅಧ್ವರ್ಯುಗಳ ಹವಿಸ್ಸು, ಹೋತೃವಿನ ಮಂತ್ರ, ಎಲ್ಲವನ್ನೂ ತಿಳಿದಿದ್ದಾನೆ.

ನೇಷ್ಟುರೂಪಿ ಅಗ್ನಿಯ ಮೂರು ರೂಪ ಸ್ವರೂಪಗಳನ್ನೂ, ಕರ್ಮ ಅರಿತು ನೆರವೇರಿಸುವ ಯಜಮಾನನ ಅಂಗುಲಿಗಳು ಸೇವಿಸುತ್ತವೆ. ಯಜಮಾನನು ಅಗ್ನಿಯ, ಮಾವರಿಯನ್ನೇ ಅನುಸರಿಸುತ್ತಾನೆ. ಭೂಮಿಗೆ ಜುಹ್ವಾದಿ ಆಜ್ಯಪಾತ್ರೆಗಳು ಬರುವಾಗ, ಯಜ್ಞೇಚ್ಛು ಅಗ್ನಿಯು ಅತಿ ಸಂತೋಷಗೊಳ್ಳುವನು.

ಅಗ್ನಿಯ ಮಾಹಾತ್ಮ್ಯ ತಿಳಿದ, ಪ್ರಯೋಗಸ್ವರೂಪ ತಿಳಿದ, ಯಜಮಾನನ ಪೂಜೆ, ಸ್ತೋತ್ರ, ಹವಿಸ್ಸುಗಳು ದೇವತೆಗಳಿಗೆ ಅರ್ಪಣವಾಗಲಿ. ಅಗ್ನಿಯು ತನ್ನ ಕರ್ಮಕ್ಕೆ ತಾನೇ ಹೋತೃವಾಗಿರಲಿ.

ಪೂರ್ಣತೆ ಪಡೆದ ಅಗ್ನಿಯು, ತೃಪ್ತಿಗೊಂಡ ದೇವತೆಗಳು ಯಜಮಾನನನ್ನು ಹವಿರೂಪ ಅಗ್ನಿವಂತರಾಗುವಂತೆ, ಅಗ್ನಿಪೂಜಕರಾಗುವಂತೆ, ನಿಯಮವಂತ, ಧನವಂತರಾಗುವಂತೆ, ಅನುಗ್ರಹಿಸಲಿ.

## ಸೂಕ್ತ - 6 (ಇಮಾಂ ಮೇ ಅಗ್ನೇ.....

ಋಷಿ ಸೋಮಾಹುತಿಭಾರ್ಗವರು ಅಗ್ನಿದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುವರು.

ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆತರುವ, ವೃಷ್ಟಿಸುರಿಸುವ, ಸ್ತುತಿಸಲ್ಪಡುವ, ಯಜ್ಞಾರ್ಹಪ್ರಾಜ್ಞ, ಯಜ್ಞಕರ್ತರ ಹಾಗೂ ಯಜ್ಞಾರ್ಹ ದೇವತೆಗಳ ಜನ್ಮತಿಳಿದವ.

ರಕ್ಷಣಾಪೇಕ್ಷಿ ಯಜಮಾನನ, ಸ್ತುತಿವಾಕ್ ಆಹುತಿಮಂತ್ರ ಉಪಾಸನಾದಿ ಯಾಗವನ್ನು, ತ್ವರಿತವಾಗಿ ಶ್ರದ್ಧೆಯಿಂದ ಇಚ್ಛಿಸಿ ಅಗ್ನಿಯು ಉಪಚರಿತನಾಗುತ್ತಾನೆ.

ದರ್ಭಾಸೀನನಾಗಿ ಅಗ್ನಿಯು ದೇವತೆಗಳನ್ನು ಆರಾಧಿಸಲಿ. ಯಜಮಾನನಿಂದ ಸ್ತುತಿ, ಭಜನೆ, ಉಪಾಸನಾಂಗ ಸಮಿತ್ತು, ಕರ್ಮಗಳನ್ನು ಸ್ವೀಕರಿಸಲಿ.

ಯಜಮಾನರ ಇಂಗಿತ ಅರಿತು ಅವರವರ ಇಷ್ಟಾರ್ಥ ನೆರವೇರಿಸಿ, ಪ್ರಭೂತಶಕ್ತಿ ಅಪರಿಮಿತ ಅನ್ನ ರಕ್ಷಣೆ ಒದಗಿಸಿ, ದ್ವೇಷಿ ಶತ್ರುಗಳನ್ನು ಯಜಮಾನರಿಂದ ದೂರಮಾಡಲಿ.

## ಸೂಕ್ತ - 7 (ಶ್ರೇಷ್ಠಂ ಯವಿಷ್ಠ ಭಾರತಾಗ್ನೇ......

ಋಷಿ ಸೋಮಾಹುತಿಭಾರ್ಗವರು ಅಗ್ನಿದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ನಮಸ್ಕಾರಾಭಿಷಿಕ್ತನಾಗಿ ಅತ್ಯಧಿಕ ಪ್ರಕಾಶಿಸುತ್ತಾನೆ. ನಾನಾವಿಧದಲ್ಲಿ ಋದ್ಧನಾಗಿ ಸಮಿದ್ರೂಪ ಅನ್ನ, ಆಜ್ಯಗಳಿಂದ ಪ್ರೋಕ್ಷಿತನಾಗುತ್ತಾನೆ. ಆಹುತೀ ರೂಪದಿಂದ ಅರ್ಪಿತವಾಗುವ ಗೋವು, ಹೋರಿ, ಗರ್ಭಿಣೀಪಶುಗಳಿಂದ ಆರಾಧಿತನಾಗುತ್ತಾನೆ.

ದೇವ ಅಥವಾ ಮಾನವರೂಪಿಯಾವುದೇ ಶತ್ರುವು ಋತ್ವಿಗ್ಯಜಮಾನರನ್ನು ಪ್ರತಿಭಟಿಸಿ ಸೋಲಿಸಲು ಅಸಮರ್ಥರಾಗಲಿ. ಶತ್ರುವನ್ನು ಸೋಲಿಸುವ ಶಕ್ತಿ ಯಜಮಾನನಿಗೆ ಉಂಟಾಗಲಿ. ಶತ್ರುಗಳಿಂದ ಯಜಮಾನನನ್ನು ರಕ್ಷಿಸಿ, ಧನ ಕೊಟ್ಟು ಅನುಗ್ರಹಿಸಲಿ.

ಸೂಕ್ತ - 8 (ವಾಜಯನ್ನಿವ ನೂ ರಥಾನ್.....

ಋಷಿ ಗೃತ್ಸಮದರು, ಅಗ್ನಿದೇವನನ್ನು ಗಾಯತ್ರೀ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಅಹಸ್ಸು, ರಾತ್ರಿ, ಉಷಃಕಾಲಗಳಲ್ಲಿ ಹಸ್ತ ಮಂತ್ರ, ಸ್ತುತಿ, ಪಠಣಗಳಿಂದ ಪೂರ್ಣಪ್ರಘುಷಿನಂತೆ ಪ್ರಕಾಶಿಸುತ್ತಾ ಪ್ರವರ್ಧಮಾನನಾಗುತ್ತಾನೆ.

ನಾನಾವರ್ಣ, ರಶ್ಮಿಸಮೂಹಿಯಾಗಿ ನಿತ್ಯ ಜ್ವಾಲೆಯಿಂದ ಅಗ್ನಿಯು ಆದಿತ್ಯನಂತೆ ಸುತ್ತಲೂ ಕಾಂತಿ ಹರಡುತ್ತಾ ಬೆಳಗುತ್ತಾನೆ.

ಅಗ್ನಿಪೂಜಕ ಕರ್ಮವು ಕುಂಠಿತವಾಗದೇ, ಆರಾಧಿತವಾಗುವ ಮನೆಯಲ್ಲಿ ಅಗ್ನಿಯು ಇರುತ್ತಾನೆ.

ಯಜಮಾನನು ಯಾರಹಿಂಸೆಗೂ ಸಿಲುಕದಂತೆ ಇರಲು, ಶತ್ರುಗಳನ್ನು ಸೋಲಿಸುವ ಅತೀಸೈನ್ಯಶಕ್ತಿ ಪಡೆಯಲು, ಇಂದ್ರ, ಸೋಮರ ರಕ್ಷಣೆ ಅಪೇಕ್ಷಿಸುತ್ತಾನೆ.

ವಿಸ್ತೃತ ಹರಡಿರುವ ಯಶಸ್ಸುಳ್ಳ ಉದಾರ ಫಲದಾನಿ, ಅಗ್ನಿಯ ಅಶ್ವಗಳ ರಥವನ್ನು ಸ್ತುತಿಸಲು ಋಷಿಯು ತನ್ನ ಅಂತರಾತ್ಮಕ್ಕೆ ಸೂಚಿಸುತ್ತಾನೆ.

## (ಅಷ್ಟಕ - 2, ಅಧ್ಯಾಯ - 6)

ಸೂಕ್ತ - 9 (ನಿ ಹೋತಾ ಹೋತೃಷದನೇ.....

ಋಷಿ ಗೃತ್ಸಮದರು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಉತ್ತಮ ಯಜ್ಞಕರ್ತ, ಉತ್ತಮ ಧನಪತಿ, ಸ್ತುತಿಯ ಮಹತ್ವ ತಿಳಿದವ, ಪಾಪದಿಂದ ಬಿಡಿಸುವ ದೇವತೆಗಳನ್ನು ಯಜ್ಞಕ್ಕೆ ಕರೆಯುವವ. ಯಾರಿಂದಲೂ ತಿರಸ್ಕರಿಸಲ್ಪಡದಿರುವವ.

ದ್ಯಾವಾಪೃಥ್ವಿಗಳೆರಡೂ ಅಗ್ನಿಯ ಪ್ರತಿದಿನದ ಉತ್ಪತ್ತಿ ಹಾಗೂ ನಾಶರಹಿತ ಸ್ಥಾನಗಳಾಗಿವೆ. ಅಗ್ನಿಯು 'ತನ್ನ ವ್ರತವು ಹಿಂಸಿಸಲಾರದೆಂಬ' ನಿಷ್ಕರ್ಷ ಜ್ಞಾನಿ.

ಯಜಮಾನರು ಸ್ತೋತ್ರಾದಿಗಳಿಂದ ಅಗ್ನಿಯನ್ನು ಪೂಜಿಸುತ್ತಾ, ಪ್ರಜ್ವಲಿತನಾದಾಗ, ಹವಿಸ್ಸನ್ನು ಅರ್ಪಿಸುತ್ತಾರೆ. ಯಾಗದಲ್ಲಿ ಹೋತೃವಾಗಿ ದೇವತೆಗಳಿಗರ್ಪಿಸಬೇಕಾದ ಹಾಗೂ ಯಜಮಾನನಿಗೆ ಕೊಡಬೇಕಾದ ಧನವನ್ನು ಪ್ರಕಟಿಸಲಿ.

ಅಗ್ನಿಯು ಯಜಮಾನರ, ಅವರ ಪುತ್ರ ಪೌತ್ರರ ಶರೀರರಕ್ಷಕನಾಗಿದ್ದು ಅವರನ್ನು ಅನ್ನವಂತರನ್ನಾಗಿ ಶ್ರೇಷ್ಠಧನವಂತರನ್ನಾಗಿ ಮಾಡಲಿ. ಎಲ್ಲಾ ಪರಿವಾರದೊಂದಿಗೆ ಕಾಂತಿಯುತ ಧನಯುತ ಕಲ್ಯಾಣ ಲಭಿಸುವಂತೆ ಮಾಡಲಿ.

ವೈಶ್ವಾನರಾಗ್ನಿಯು ವಿಶಿಷ್ಟ ನಾನಾ ಪ್ರಜ್ಞೆಯ ಸರ್ವವ್ಯಾಪಿ. ಚಿತ್ರಾತ್ಮಕ ಕಾಂತಿಯ ಮಾನವದರ್ಶಕ, ಬಣ್ಣದವನಾಗಿದ್ದು, ಕಂದು ಕುಂಕುಮ ವರ್ಣದ ಅಶ್ವರಥಹೊಂದಿದ್ದಾನೆ. ನಾನಾ ಸ್ಥಾನಗಳಲ್ಲಿ ಸ್ಥಾಪಿತನಾಗಿ ಉತ್ತರವೇದಿಯಲ್ಲಿ ಪ್ರಜ್ವಲಿಸುತ್ತಾ ಯಜಮಾನರಿಂದ ಭಜನೆ, ಪೂಜೆ, ಹವಿಸ್ಸಿಂದ ವ್ಯಾಪ್ತನಾಗಿದ್ದಾನೆ.

ನಾನಾ ಓಷಧಿಗಳಲ್ಲಿ ಸುಪ್ತನಾಗಿ ಗರ್ಭಭೂತನಾಗಿರುವ ಅಗ್ನಿಯನ್ನು, ಅಧ್ವರ್ಯುಗಳು ಅರಣಿಯಿಂದ ಉತ್ಪನ್ನಮಾಡಿದಾಗ, ತನ್ನ ತೇಜಸ್ಸಿಂದ ಶತ್ರುಗಳನ್ನು ಸೋಲಿಸುತ್ತಾನೆ ಹಾಗೂ ರಾತ್ರಿ ತಮೋರಹಿತನಾಗಿ, ಜ್ಞಾನತೇಜಸ್ಸಿಂದ ಪ್ರಕಾಶಿಸುತ್ತಾನೆ.

ದೇವದೂತ ಅಗ್ನಿಗೆ ಮನುವಿನಂತೆ ಯಜಮಾನನೂ ಆಜ್ಯಸೇಚನೆ, ಹವಿಸ್ಸು ಸ್ತುತಿ ಅರ್ಪಿಸುತ್ತಾನೆ. ಅಗ್ನಿಯು ಯಜಮಾನಾಭಿಮುಖ ಬಂದು ಸ್ತುತಿ ಸ್ವೀಕರಿಸಲಿ.

ಜ್ವಾಲಾಪೂರ್ಣ ಮಧುರಫಲದೊಡೆಯ ಅಗ್ನಿಯು, ಯಜಮಾನನಿಗೆ ಧನ ಕೊಡಲಿ.

## ಸೂಕ್ತ - 11 (ಶ್ರುಧೀ ಹವಮಿಂದ್ರ ಮಾ.....

ಋಷಿ ಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ವಿರಾಟಸ್ಥಾನ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಪ್ರಸಿದ್ಧ ತೇಜೋರೂಪಿ ವಜ್ರಾಯುಧಿ ಮಹಾಗುಣಸಂಪನ್ನ ಪರಾಕ್ರಮಿ ದೇವಾತ್ಮ ಶೋಭನಾತ್ಮಕ ಬಲದವ, ವೀರಪ್ರಜ್ಞಾವಂತ, ಮಾನವಹಿತಕಾರಿ, ಶತ್ರುಶೋಷಕ, ಇಷ್ಟಾರ್ಥಪ್ರದ.

ಸ್ತುತಿಸ್ತೋಮ ಪಠಣಗಳೊಂದಿಗೆ ಇಂದ್ರನು ಹರ್ಷಗೊಳ್ಳುತ್ತಾನೆ. ಅಧಿಕ ಹವಿಸ್ಸನ್ನು ಅರ್ಪಿಸುವುದರಿಂದ ಶಕ್ತಿ ವೃದ್ಧಿಗೊಳ್ಳುತ್ತಾನೆ. ಸ್ತುತಿಸುವ ಪೂಜಕರು ಶೀಘ್ರವಾಗಿ ಮಹಾಗುಣವುಳ್ಳ ಮಹಾಸ್ಥಿತಿವಂತರಾಗಿ ಇಂದ್ರನಿಂದ ರಕ್ಷಿತರಾಗಿ, ಅನ್ನ ಪಡೆಯುತ್ತಾರೆ.

ಹಿಂಡಿದ ಸೋಮರಸ ಪಾನಮಾಡುತ್ತಾ, ರಾಜರ್ಷಿಗೆ ಪ್ರಕಾಶಮಾನ ಆದಿತ್ಯ ಪ್ರಕಾಶವನ್ನು, ಇಂದ್ರನು ಒದಗಿಸಿದನು. ಮದಕಾರಿ ಸೋಮರಸಹಿಂಡಿದ ತ್ರಿತಋಷಿಗಾಗಿ, ಸಕಲ ಅಸುರ ಪ್ರಜೆಗಳನ್ನೂ ಹಿಂಸಕರನ್ನೂ ನಾಶಮಾಡಿದನು.

ಇಂದ್ರನು ಅಸುರ ವಿಶ್ವರೂಪ ಹಾಗೂ ಅರ್ಬುದ ರಾಕ್ಷಸರನ್ನು ಕೊಂದು, ಫಣಿಗಳ ಪ್ರಭು ವಲಾಸುರನನ್ನು ವಜ್ರಾಯುಧದಿಂದ ಸೀಳಿಹಾಕಿದನು. ಮಾಧ್ಯಮಿಕ ವಾಕ್ಕುಗಳೊಂದಿಗೆ ಅತಿಶಯ ಶಬ್ದದಿಂದ ಅಸುರರನ್ನು ಕೊಂದಾಗ, ವಜ್ರಾಯುಧ ಶಬ್ದದಿಂದ ದ್ಯಾವಾಪೃಥ್ವಿಗಳು ಕಂಪಿಸಿದವು.

ತಾನು ಮರಣರಹಿತನೆಂದು ತಿಳಿದು, ವಂಚಕ ಅಸುರ ವೃತ್ರನು, ಮೇಘಾಶ್ರಯ ಮಾಡಿದಾಗ, ಇಂದ್ರನು ಸ್ವಸಾಮರ್ಥ್ಯದಿಂದ ವಜ್ರಾಯುಧ ಪ್ರಯೋಗಿಸಿ, ವೃತ್ರನನ್ನು ಎಡಕ್ಕೆ ಕೆಡವಿ ನಾಶಗೊಳಿಸಿದ; ತಡೆಯಲಾಗಿದ್ದ ಉದಕಗಳನ್ನು ವೃದ್ಧಿಗೊಳಿಸಿ ಹರಿಯುವಂತೆ ಮಾಡಿದ.

ಮರುತ್ತುಗಳು ಇಂದ್ರ ಸಹಾಯಕರು, ಶತ್ರು ಹಿಂಸಕರು ಶಕ್ತರು, ಪೂಜ್ಯರು. ಸೋಮರಸವನ್ನು ಭಕ್ಷಿಸಿ ದೇವಲೋಕ ಪ್ರಜೆಗಳನ್ನೂ, ಮಾನವ ಯಜಮಾನರನ್ನೂ, ಪಶುಪುತ್ರಾದಿಗಳಿಂದ ವೃದ್ಧಿಗೊಳಿಸುತ್ತಾರೆ.

ಇಂದ್ರನ ಕುದುರೆ 'ಹರಿಗಳು' ಧ್ವನಿಮೊಳಗಿಸಿ ಮೇಘದಲ್ಲಿ ವಿಹರಿಸಿದಾಗ ಪೃಥ್ವಿಯು ವೃಷ್ಟಿಯನ್ನು ನಿರೀಕ್ಷಿಸುತ್ತದೆ.

ಶತ್ರುಗಳನ್ನು ಸೋಲಿಸಲು, ವಜ್ರಾಯುಧಿ ಇಂದ್ರನು, ಅಶ್ವಗಳೊಡನೆ ಬರಲಿ. ಯಾಗದಲ್ಲಿ ಆಜ್ಯರೂಪಿ ಅನ್ನ, ಹರ್ಷಪೂರಿತ ಸೋಮದಿಂದ, ಉದರದ ಎರಡೂ ಭಾಗಗಳನ್ನು ತುಂಬಿಕೊಳ್ಳಲಿ. ಕಳೃತದಿನಗಳಲ್ಲಿ ಶಸ್ತ್ರ ಮಂತ್ರಗಳಿಂದ ಸಿದ್ಧವಾದ ಸೋಮರಸ ಕುಡಿದು ಮುಖದ ಶ್ಮಶ್ರುಗಳನ್ನು ಒರಸಿಕೊಳ್ಳಲಿ.

ಇಂದ್ರದತ್ತ ವಸ್ತುಗಳು ಇಷ್ಟಾರ್ಥಪೂರೈಸುತ್ತವೆ, ಕರ್ಮಫಲೇಚ್ಛೆಯಿಂದ ಭಜಿಸಿ ಪ್ರಶಂಶಿಸಿದ ಯಜಮಾನನು, ಇಂದ್ರ ಹೃದಯದಲ್ಲಿ ರಕ್ಷಣೆ ಪಡೆಯುತ್ತಾನೆ.

ಇಂದ್ರನು ಯಜಮಾನನ ಸ್ತುತಿ ಪಠಣಗಳನ್ನು ತಿರಸ್ಕರಿಸದೇ ಸ್ವೀಕರಿಸಲಿ. ಇಂದ್ರನೊಂದಿಗೆ ಇರುವ ಮರುತ್ತುಗಳು, ಸಂಘಾತ್ಮಕ ಶಕ್ತಿ, ವಾಸಯೋಗ್ಯ ಗೃಹ ಸಹವಾಸಯೋಗ್ಯ ಮಿತ್ರರನ್ನು ಕೊಡಲಿ. ಇಂದ್ರನು ಯಜಮಾನನಿಗೆ ಪಾತ್ರವಾಗುವಂತಹ ಧನ, ಅಧಿಕಬಲ, ರಕ್ಷಣೆ, ಶ್ರೇಷ್ಠ ಪುತ್ರರೊಡಗೂಡಿದ ಇಷ್ಟಾರ್ಥಪೂರೈಸಲಿ.

**ಸೂಕ್ತ - 12 (ಯೋ ಜಾತ ಏವ ಪ್ರಥಮೋ.....**

ಋಷಿಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಇಂದ್ರದೇವನ ಶ್ರೇಷ್ಠ ಕರ್ಮಗಳನ್ನು ಋಷಿಗಳು ಸ್ಮರಿಸುತ್ತಾರೆ.

ಇಂದ್ರನು ಸೋಮರಸ ಹಿಂಡುವ ಯಜಮಾನರನ್ನೂ, ಪುರೋಡಾಶಾದಿಗಳನ್ನು ಪಕ್ವಮಾಡುವವರನ್ನೂ, ರಕ್ಷಣೆಯಾಚಿಸುವವರನ್ನೂ ಸ್ತುತಿಕರ್ತರನ್ನೂ ರಕ್ಷಿಸುತ್ತಾನೆ.

ಸೋಮಪಾನದ ಬಲದಿಂದ ಹಾರುವ ಪರ್ವತಗಳ ರೆಕ್ಕೆ ಕತ್ತರಿಸಿ, ಅವು ಹಾರದಂತೆ ಸ್ಥಿರವಾಗಿರಿಸಿದ, ಅಚಲಪರ್ವತವನ್ನು ಚಲಿಸುವಂತೆ ಮಾಡಿದ, ದ್ಯುಲ್ಲೋಕವನ್ನು ತಡೆದು ನಿಲ್ಲಿಸಿದ, ನಕ್ಷತ್ರಲೋಕವನ್ನು ಸ್ಥಿರವಾಗಿರುವಂತೆ ಮಾಡಿದ, ಸೂರ್ಯನನ್ನು ಉಷೆಯನ್ನು ಅಂತರಿಕ್ಷವನ್ನು ಸೃಷ್ಟಿಸಿದ, ದ್ಯಾವಾಪೃಥ್ವಿಗಳನ್ನು ಭೀತಿಗೊಳಿಸಿದ, ಅವುಗಳನ್ನು ಅಲುಗಾಡದಂತೆ ಸ್ಥಿರವಾಗಿರುವಂತೆ ಮಾಡಿದ ದೇವ –ಇಂದ್ರ.

ಇಂದ್ರನು ಸಪ್ತಸಂಖ್ಯಾಕ ರಶ್ಮಿಗಳಿಂದ ಮೇಘಮಧ್ಯದಲ್ಲಿ ವಿದ್ಯುತ್‌ರೂಪ ಹರಿಸಿ, ಅಗ್ನಿ ಸೃಷ್ಟಿಸಿ, ಮೇಘಹನನಮಾಡಿ, 'ಅಹಿ'ಯಿಂದ ಸಪ್ತನದಿಗಳನ್ನು ಬಿಡಿಸಿ, ಉದಕಪ್ರೇರಿಸಿ ಗಂಗಾದಿ ನದಿಗಳು ಹರಿಯುವಂತೆ ಮಾಡಿದನು.

ಮಹತ್ತಾದ ಪಾಪಿಗಳನ್ನೂ, ಅಹಂಕಾರಿಗಳನ್ನೂ ಕೊಂದು, ಅನಾತ್ಮರಿಗೆ ಸಹಾಯಮಾಡದೆ, ಇಂದ್ರನು ಶತ್ರುಕ್ಷಯಕಾರಕನಾದನು, ಅಸುರರನ್ನು ಗುಹೆಸೇರಿಸಿ, ಗುರಿಇಟ್ಟು ಶತ್ರುವನ್ನು ಜಯಿಸಿ,

ಭಯಂಕರ ಶತ್ರುಗಳು ಇಂದ್ರನ ಭಯದಿಂದ 'ಇಂದ್ರನೆಲ್ಲಿರುವನು'? -ಎಂದು ವಿಚಾರಿಸುತ್ತಾರೆ. ವಜ್ರಾಯುಧ ಸಮಾನ ಬಾಹುವಿನಲ್ಲಿ, ವಜ್ರಾಯುಧಧರಿಸಿದ ಇಂದ್ರನಿಗೆ, ದ್ಯಾವಾಪೃಥ್ವಿಗಳು ಪರ್ವತಗಳೂ ಭಯಪಡುವವು.

ದೇವಸೇನೆ, ಮಾನವಸೇನೆ, ಉತ್ಕೃಷ್ಟ ಹಾಗೂ ಅಧಮಶತ್ರುಗಳು, ಇಂದ್ರರಥ ಸದೃಶರಥದಲ್ಲಿ ಕುಳಿತರಥಿಕರೂ, ಇಂದ್ರನನ್ನು ಪ್ರತ್ಯೇಕವಾಗಿ ರಕ್ಷಣೆಗಾಗಿ ಕರೆಯುತ್ತಾರೆ.

ಧನಿಕ, ದರಿದ್ರ, ಯಾಚಕ, ಸ್ತುತಿಸುವವರು ಎಲ್ಲರಿಗೂ ಏಕಪ್ರಕಾರ ಧನದಾತನಾದ ಇಂದ್ರನನ್ನು ಬಿಟ್ಟು ರಕ್ಷಣೆ ಪಡೆಯಲಾಗುವುದಿಲ್ಲ.

ಅಶ್ವ, ಗೋವು, ಗ್ರಾವ ರಥಾದಿಗಳೆಲ್ಲಾ ಇಂದ್ರನವೇ, ಇಂದ್ರಾನುಗ್ರಹದಿಂದಲೇ ಕಲ್ಯಾಣಾತ್ಮಕ ಪುತ್ರ, ಪೌತ್ರರನ್ನು ಹೊಂದಿ ಯಜಮಾನಾದಿಗಳು ಸಕಲದಿನಗಳಲ್ಲೂ ಸ್ತುತಿಸುತ್ತಾರೆ.

ಸೋಮ ಹಿಂಡುವ ಯಜಮಾನನಿಗೆ ರಕ್ಷಣೆ, ಅನ್ನ, ಬಲ, ಕೊಟ್ಟು ಸೋಮ ಹಾಗೂ ಪುರೋಡಾಶಗಳನ್ನು ವೃದ್ಧಿಸುತ್ತಾನೆ.

ಇಂದ್ರನಲ್ಲಿ ಜನರು ಶ್ರದ್ಧೆ ಹೊಂದಲಿ.

## ಸೂಕ್ತ - 13 (ಋತುರ್ಜನಿತ್ರೀ ತಸ್ಯಾ ಅಪಸ್ಪರಿ.....

ಗೃತ್ಸಮದ ಋಷಿ ಇಂದ್ರದೇವನನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಅದ್ವಿತೀಯ ಪ್ರಭು, ಯಜಮಾನ ರಕ್ಷಕ, ಎಲ್ಲರಿಗೂ ಅನ್ನ ಕೊಡುವವ. ಎಲ್ಲರಿಗೂ ಸುಖತರುವವ. ಷಟಸಂಖ್ಯಾತ ಸೃಷ್ಟಿಯನ್ನು ನಿಯಮದಲ್ಲಿಟ್ಟು, ಪಂಚಜನರನ್ನು ಸರ್ವತ್ರಪಾಲಿಸುವವ.

ಅನ್ನಲಾಭಕ್ಕಾಗಿ, ದಸ್ಯುನಾಶಕ್ಕಾಗಿ, ವೀರ್ಯವತ್ತಾದ ಹವಿಸ್ಸು ಭಕ್ಷಿಸಿ, ಶ್ಲಾಘನ ಸಾಮರ್ಥ್ಯ ಪಡೆದು ಸಮಸ್ತ ಕರ್ಮಗಳನ್ನೂ ಮಾಡುವ ಇಂದ್ರನು, ಶತ್ರುಧನ ಪಡೆವ ಬಲಶಾಲಿ.

ಇಂದ್ರನಿಗಾಗಿ ವರ್ಷಋತುವಿನಲ್ಲಿ, ಸೋಮಲತೆ ಸಾರಭೂತವಾಗಿ ಬೆಳೆದಿದೆ. ಸಾವಿರಾರು ಕುದುರೆಗಳು ಇಂದ್ರ ಸುಖಕ್ಕೆ ಸಿದ್ಧವಿವೆ. ಶ್ರೇಷ್ಠಪುತ್ರರೊಡನೆ ಶಸ್ತ್ರಾದಿಮಂತ್ರ ಸ್ತೋತ್ರಗಳಿಂದ, ಯಜಮಾನರು ಇಂದ್ರನನ್ನು ಪ್ರವೃದ್ಧಮಾಡುತ್ತಾರೆ. ಹೋತೃವು ಸಿದ್ಧ ಹವಿಸ್ಸು ಹಾಗೂ ಪುರೋನುವಾಕ್ಯನ್ನು ಪ್ರಕಟಿಸುತ್ತಾನೆ. ಅಧ್ವರ್ಯುವು, ಪಶ್ವಾದಿ ಛೇದನದಲ್ಲಿ ನಿರತನಾಗಿದ್ದಾನೆ. ಇತರ ಕರ್ಮಗಳನ್ನು ಬ್ರಹ್ಮಋಷಿ ಋತ್ವಿಕ್‌ಗಳು, ಪ್ರಾಯಶ್ಚಿತ್ತದಿಂದ ಸರಿಪಡಿಸುತ್ತಾರೆ.

ಇಂದ್ರರೂಪಿನದಿಗಳು, ಇಂದ್ರವೀರ್ಯಕರ್ಮದಿಂದ ತುಂಬಿ, ಇಂದ್ರರಚಿತ ಮಾರ್ಗದಲ್ಲೇ ಹರಿದು ಸಮುದ್ರ ಸೇರುತ್ತವೆ.

ಸೂರ್ಯನಕ್ಷತ್ರ ಕಾಂತಿ ಸೃಷ್ಟಿಸಿ, ಸಕಲರ ರಕ್ಷಣೆಗಾಗಿ ಪೃಥ್ವಿಯನ್ನು ಸೂರ್ಯಪ್ರಕಾಶ ದರ್ಶನ ಯೋಗ್ಯ ಮಾಡಿದವ ಇಂದ್ರನೇ. ಇವನೇ ಫಲಪುಷ್ಪ ಓಷದಿಗಳನ್ನು ಸ್ಥಾಪಿಸಿ ಒಣಗಿದ ಧಾನ್ಯಗಳಲ್ಲಿ ಮಧುರ ರಸತುಂಬಿ, ಮಹತ್ ಪ್ರಾಣಿ ಸಮೂಹ ಸೃಷ್ಟಿಸಿದನು.

ಕಾರ್ಯ ಮಾಡುತ್ತಾರೆ. ಇಂದ್ರನನ್ನು ಉಪಚರಿಸುವವರು ಧನಯುಕ್ತರಾಗುತ್ತಾರೆ.

ಸ್ವಪ್ನೋದಪುತ್ರ 'ಸಹವಸು'ವನ್ನು ಕೊಲ್ಲಲು ವಜ್ರರೂಪಿಯಾದ ಇಂದ್ರನು 'ದಬೀತಿ ಋಷಿಯ ಸಹಾಯಕ್ಕೆ, ಅಸುರರನ್ನು ಬಂಧನದಲ್ಲಿರಿಸಿ ಶಿಕ್ಷಿಸಿದನು. ರಾಜರ್ಷಿ 'ತುರ್ವಷಿ'ಯ ನದಿಯನ್ನು ಸುಗಮವಾಗಿ ದಾಟುವಂತೆ ಮಾಡಿದನು. ಕುರುಡ ಕುಂಟನಾಗಿದ್ದ 'ಪರಾವಾಕ್ಕ'ನನ ಆಪತ್ತಿನಿಂದ ರಕ್ಷಿಸಿದನು, ಹೀಗೆ ವೀರಕರ್ಮಗಳಿಂದ ಇಂದ್ರನು ಪ್ರಶಸ್ತ್ಯನಾದನು.

ಯಜಮಾನನು ಇಂದ್ರದತ್ತ ಪೋಷಕ ಧನದಿಂದ, ಅನ್ನವೃದ್ಧಿ ಬಲವೃದ್ಧಿ ಪಡೆದ ಸುಖವಾಗಿದ್ದಾನೆ. ಪುತ್ರಾದಿ ಪ್ರಜೆಗಳಿಗೆ ಹಂಚುವ, ಪ್ರತಿದಿನ ಉಪಯೋಗಿಸಲಿಚ್ಛಿಸುವ ಇಂದ್ರನ ಧನ ಸಂಪತ್ತನ್ನು, ದಾನ ಮತ್ತು ಉಪಭೋಗಕ್ಕೆ, ಇಂದ್ರನು ಯಜಮಾನನಿ ಕೊಡಲಿ.

## ಸೂಕ್ತ - 14 (ಅಧ್ವರ್ಯವೋ ಭರತೇಂದ್ರಾಯ.....

ಋಷಿ ಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ

ಇಂದ್ರನು ದ್ಯುಲ್ಲೋಕ ಅಂತರಿಕ್ಷ ಪೃಥ್ವಿಗಳ ಸಕಲ ಧನಸಂಪತ್ತಿಗೂ ಪ್ರಭು. ಸದಾಮದಕ ಸೋಮರೂಪಿ ಅನ್ನ ಇಚ್ಛಿಸುತ್ತಾನೆ ಮತ್ತು ಸೋಮದ ಗಾಢವಾದ ಸುಖಸ್ವರೂಪವನು ಅವನುಮಾತ್ರಾ ತಿಳಿಯಬಲ್ಲ. ಸೋಮ ಅರ್ಪಿಸುವ ಯಜಮಾನನನ್ನು ಅತಿಶಯವಾ ತಿಳಿಯುತ್ತಾನೆ. ಸೋಮರಸವನ್ನು ಇಂದ್ರನು ಕ್ಷೇಮಕ್ಕಾಗಿ, ಗೋವಿನ ಕೆಚ್ಚಲಿನಲ್ಲಿ ಹಾಲ ತಂಬಿಕೊಳ್ಳುವಂತೆ ತುಂಬಿಕೊಳ್ಳುತ್ತಾನೆ.

'ಕುತ್ಸ, ಆಯ, ಅತಿಥಿಗ್ವ' ಋಷಿಗಳಿಗಾಗಿ ಹಿಂಸಕ 'ಶುಷ್ಣ'ನೇ ಮೊದಲಾದ ಅಸುರರನ್ನು ನಾಶಮಾಡಿದ, ವಲನನ್ನು ಹಿಂಸಿಸಿ ಅಪವೃತ ಗೋವು ಬಿಡಿಸಿದ ಇಂದ್ರನೇ ಅಸುರ 'ದೃಭೀಕ'ನನ್ನು ಕೊಂದ. ಇಂದ್ರನು ತೊಂಬತ್ತೊಂಭತ್ತು ಬಾಹುಗಳ ರಾಕ್ಷಸ 'ಉರಣ'ನನ್ನು ಕೊಂದ, ರಾಕ್ಷಸ 'ಅರ್ಬುದ'ನನ್ನು ತಲೆಕೆಳಗುಮಾಡಿ ನಾಶಮಾಡಿದ. 'ಅಶ್ನ' ಅಸುರನನ್ನು ಕೊಂದು 'ಶುಷ್ಣ'ನ ತೋಳುಕತ್ತರಿಸಿದ, 'ಪಿಪ್ರನಮುಚಿ, ರುಧಿಕ್ರ'ರನ್ನು ಕೊಂದನು. ಮಾಯಾವಿ 'ಶಂಬರಾಸುರ'ನ ನೂರುಪ್ರಾಚೀನ ಪಟ್ಟಣ ನಾಶಮಾಡಿದ, ಒಂದುಲಕ್ಷ ವೀರ ಪುತ್ರರೊಂದಿಗೆ ರಾಕ್ಷಸ 'ವರ್ಚಿ'ಯನು ನಾಶಮಾಡಿ, ವಜ್ರದಿಂದ 'ವೃತ್ರ'ನನ್ನು ಸೀಳಿದ, ಪೃಥ್ವಿಯ ಉತ್ತುಂಗದ ಮೇಲೆ ಸಾವಿರಾರು ಅಸುರರನ್ನು ಕೊಂದು ಬೀಳಿಸಿದ.

ಇಂದ್ರನಿಂದ ಇಷ್ಟಾರ್ಥಗಳಿಸಲು ಯಜಮಾನನು ಅಪೇಕ್ಷಿಸುತ್ತಾನೆ, ಇದಕ್ಕಾ ಅಧ್ವರ್ಯುವನ್ನು ಯಾಗಕ್ಕೆ ಪ್ರಚೋದಿಸಿ, ಮಾರ್ಜನ ಆದೋಹನಗಳಿಂದ ಶೋಧಿತವಾದ ಸೋಮವನ್ನು ಚಮಸಪಾತ್ರೆಯಲ್ಲಿ ಉದಕದೊಂದಿಗೆ, ಇಂದ್ರನಿಗಾಗಿ, ಅಗ್ನಿಯಲ್ಲಿ ಅರ್ಪಿಸುತ್ತಾನೆ

ಉತ್ತರವೇದಿಕೆಯಲ್ಲಿ ಇಂದ್ರನು ಸ್ಥಾಪಿತನಾಗಲಿ. ಶ್ರೇಷ್ಠಪುತ್ರರೊಂದಿಗೆ ಯಜಮಾನನು ಶಸ್ತ್ರಾದಿ ಮಂತ್ರವನ್ನು ಪಠಿಸುತ್ತಾನೆ. ಉಪಯೋಗಿಸಲು ಇಚ್ಛಿಸುವ ಸಂಪತ್ತನ್ನು ದಾನ ಹಾಗೂ ಉಪಭೋಗಕ್ಕಾಗಿ ಯಜಮಾನನಿಗೆ ಇಂದ್ರನು ಪೂರ್ಣವಾಗಿ ಕೊಡಲಿ.

**ಸೂಕ್ತ - 15 (ಪ್ರ ಘಾ ನ್ವಸ್ಯ ಮಹತೋ ಮಹಾನಿ.....**

ಗೃತ್ಸಮದ ಋಷಿ ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದಿಕ್ಕುಗಳನ್ನು ಅಳೆವರೀತಿ ಉಷಾದೇವಿಯ ಸೈನ್ಯ ಚಮುರಿಸಿ, ಅವಳ ಶಕಟಪುಡಿಮಾಡಿ, ಆಧಾರರಹಿತ ಆಕಾಶದಲ್ಲಿ ಪ್ರಕಾಶಮಾನನಾದ ಸೂರ್ಯನನ್ನು ಸ್ಥಾಪಿಸಿ, ಅಂತರಿಕ್ಷ ದ್ಯಾವಾಪೃಥ್ವಿಗಳನ್ನು ತೇಜಸ್ಸಿನಿಂದ ತುಂಬಿ, ಪೃಥ್ವಿಯನ್ನು ಪ್ರಖ್ಯಾತಗೊಳಿಸಿದವ –ಇಂದ್ರನೇ.

ಮಹತ್ತಾದ ಪಾಪನಾಶಕ ನದಿಗಳು ಬಹುಕಾಲ ಹರಿವಂತೆ ವಿಶೇಷರೀತಿಯ ಮಾರ್ಗ ನಿರ್ಮಿಸಿ, ಪೂರ್ವಾಭಿಮುಖಿ ಹರಿದ ನದಿಯನ್ನು ಉತ್ತರಕ್ಕೆ ತಿರುಗಿಸಿ, ಋಷಿಸಂಚಾರಾರ್ಥ ನದಿಗಳನ್ನು ಉಪಶಮನ ಮಾಡಿ, ದಾಟಲಾಗದ ನದಿಗಳನ್ನು, ತಾನೇ ಋಷಿಗಳಿಂದ ದಾಟಿಸಿದವ –ಇಂದ್ರನೇ.

'ಹಾರವೃಕ' ಋಷಿ ಕುಂಟ ಹಾಗೂ ಕುರುಡ. ಕನ್ಯೆಯರಿಂದ ಹಾಸ್ಯಕ್ಕೊಳಗಾಗಿದ್ದ. ಇಂದ್ರನ ಅನುಗ್ರಹದಿಂದ ಹಾರವೃಕನು ದೃಷ್ಟಿಗಳಿಸಿ ಆ ಕನ್ಯೆಯರನ್ನು ಓಡಿಸಿಕೊಂಡುಹೋದನು. ರಾಜರ್ಷಿ 'ದಭೀತಿ'ಯನ್ನು ಹೊತ್ತು ಒಯ್ಯುತ್ತಿದ್ದ ಅಸುರರನ್ನು ಎದುರಿಸಿ ಅವರ ಆಯುಧಗಳನ್ನು ಸುಟ್ಟು, ಅಶ್ವರಥ ಗೋವುಗಳನ್ನು ದಭೀತಿಗೆ ಕೊಟ್ಟು, ಅವನ ಕಂಚುಕಿಗೆ ಧನ ಕೊಟ್ಟು ರಕ್ಷಿಸಿದನು.

ತ್ರಿತದೃಕನ ಅಹಸ್ಸುಗಳಲ್ಲಿ ಹಿಂಡಿದ ಸೋಮಪಾನದ ಹರ್ಷದಿಂದ ಇಂದ್ರನು ವೃತ್ರನನ್ನು ಕೊಂದನು. ಅಂಗಿರಸ್ಸುಗಳಿಗಾಗಿ ರಾಕ್ಷಸ ವಲನನ್ನು ಸೀಳಿ, ಅವನ ಪರ್ವತ ಶಿಲೆಯ ಕೃತ್ರಿಮದ್ವಾರ ತೆಗೆದ ಹಿಂಸಕ ಅಸುರ 'ಚಮುರಿ' ಮತ್ತು 'ಧುನಿ'ಗಳನ್ನೂ, ದೀರ್ಘನಿದ್ದೆಗೆ ಒಳಪಡಿಸಿ ಕೊಂದನು.

ಪುತ್ರರೊಡಗೂಡಿ ಇಂದ್ರನನ್ನು ಪೂಜಿಸುವ ಯಜಮಾನನ ಸಂಪತ್ತಿನ ರಕ್ಷಣೆ ಕೊಟ್ಟು ಇಂದ್ರನು ಶೀಘ್ರವಾಗಿ ಇಷ್ಟಾರ್ಥ ಕೊಡುತ್ತಾನೆ.

**ಸೂಕ್ತ - 16 (ಪ್ರ ವಃ ಸತಾಂ ಜೇಷ್ಠತಮಾಯ.....**

ಋಷಿಗೃತ್ಸಮದರು ಇಂದ್ರದೇವನನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕೈಯಲ್ಲಿ ವಜ್ರಾಯುಧ, ಶರೀರದಲ್ಲಿ ತೇಜಸ್ಸು, ಉದರದಲ್ಲಿ ಸೋಮರಸ ತುಂಬಿಕೊಂಡಿರುವ ಇಂದ್ರನು, ದೇವಶ್ರೇಷ್ಠ, ಜಲಾಶಯದಂತೆ ಧನಯುಕ್ತ, ಸ್ತುತ್ಯಾದಿಗಳಿಂದ ಸಂಯುಕ್ತ, ಸಕಲಸಾಮರ್ಥ್ಯಗಳಿಂದ, ಶೇಖರಿತನಾಗಿರುವ ಕ್ಷಯರಹಿತ ಇಂದ್ರನು ಇತರರನ್ನು ಕ್ಷಯಿಸುವಂತೆ, ಮಾಡುತ್ತಾನೆ, ಶತ್ರುದರ್ಶಕನಾಗಿ ಶತ್ರುನಾಶ ಮಾಡುತ್ತಾನೆ.

ಇಂದ್ರನಿಲ್ಲದೆ ಜಗತ್ತೇ ಇಲ್ಲ. ಇಂದ್ರನ ವೇಗ, ಬಲ, ವಜ್ರಾಯುಧ ಇವುಗಳನ್ನು ಪ್ರತಿಭಟಿಸುವ ಶಕ್ತಿ, ದ್ಯಾವಾಪೃಥ್ವಿ, ಪರ್ವತಗಳು, ಅಸುರರು, ಮಾನವ ಶತ್ರುಗಳು, ಯಾರಿಗೂ ಇಲ್ಲ.

ಸೋಮರಸವು ಅನುಷ್ಠಾತೃಗಳಿಗೆ ಪಾನಮಾಡುವವರಿಗೆ ಉತ್ತೇಜಕ, ಶಕ್ತಿವರ್ಧಕ, ಅನ್ನವಂತೆ, ಇಷ್ಟಾರ್ಥಪ್ರದ, ಫಲದಾತೃ ಪಾನವಾಗಿದೆ. ಅಧ್ವರ್ಯು ಪ್ರತಿಪಸ್ಥಾತೃಗಳಿಬ್ಬರೂ ಗ್ರಾಮಗಳಿಂದ ಮದಕರ ಸೋಮವನ್ನು ಇಂದ್ರನಿಗಾಗಿ ಹಿಂಡುತ್ತಾರೆ. ಶ್ರೇಷ್ಠ ಪುತ್ರರೊಡಗೂಡಿ ಇಂದ್ರನ ಅತಿಶಯ ಸಾನ್ನಿಧ್ಯ ಇಚ್ಛಿಸಿ, ಯಜಮಾನರು ಕರ್ಮ, ಸ್ತುತಿ ಹವಿಸ್ಸು ಪೂಜೆಗಳನ್ನು ಅರ್ಪಿಸುತ್ತಾರೆ.

ಇಷ್ಟಾರ್ಥ ಸುರಿಸುವ ಅಗ್ನಿಯ ಜೊತೆ ಇಂದ್ರನು, ಸೋಮಸ್ವೀಕರಿಸಲಿ, ಪುಷ್ಟನಾಗಲಿ ಯಜಮಾನನನ್ನು ಅರಿಯಲಿ. ಯಜಮಾನನನ್ನು ತಿರಸ್ಕರಿಸದೆ ರಕ್ಷಣೆಗೆ ಬರಲಿ.

ಇಂದ್ರದತ್ತ ಸಂಪತ್ತು ಸ್ತುತಿಕರ್ತನಿಗೆ ಇಷ್ಟಾರ್ಥರೂಪ ದಕ್ಷಿಣೆಯಂತೆ ಬರಲಿ. ಶತ್ರುಬಾಧೆಗೆ ಒಳಗಾಗುವ ಮುಂಚೆಯೇ ಯಜಮಾನನನ್ನು, ಇಂದ್ರನು ರಕ್ಷಿಸಲಿ.

**ಸೂಕ್ತ - 17 (ತದಸ್ಮೈ ನವ್ಯಮಙ್ಗಿರಸ್ವದರ್ಚತ.....**

ಋಷಿಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಸಮಸ್ತ ಲೋಕವನ್ನೂ ಜಯಿಸಿದವ, ದ್ಯಾವಾಪೃಥ್ವಿಗಳಿಗೆಲ್ಲಾ ತೇಜಸ್ಸು ವ್ಯಾಪಿಸಿದವ, ಶಿರದಲ್ಲೇ ದ್ಯುಲೋಕ ಎತ್ತಿಹಿಡಿದವ, ತಮಸ್ಸನ್ನು ಹೋಗಲಾಡಿಸಿ ಜಗತ್ತನ್ನು ವ್ಯಾಪಿಸಿದವ ಸುಖಾನುಭವ ಕೊಡುವವನಾಗಿದ್ದಾನೆ.

ಸ್ವೇಚ್ಛೆಯಿಂದ ಚಲಿಸುತ್ತಿದ್ದ ಪರ್ವತಗಳನ್ನು ಸ್ಥಿರಗೊಳಿಸಿದ ಇಂದ್ರನು, ಉದಕಪ್ರವಾಹವನ್ನು ಅಧೋಮುಖ ಹರಿವಂತೆ ಮಾಡಿದ. ಯಾಜ್ಞಿಕರ ಸ್ತೋತ್ರದಿಂದ, ಸೋಮಪಾನದಿಂದ ತೇಜೋರೂಪಬಲವನ್ನು ಬೆಳೆಸಿಕೊಂಡು, ಶತ್ರುನಾಶಕಾಲದಲ್ಲಿ ಕವಚದಿಂದ ಶರೀರ ರಕ್ಷಿಸಿಕೊಳ್ಳುತ್ತಾನೆ.

ಇಂದ್ರನು ಶತ್ರುನಾಶಕ ಬಲ ಪ್ರಕಟಿಸಿದೊಡನೆಯೇ, ಬಾಧಕರಾಕ್ಷಸರು ಭೀತಿಯಿಂದ ಚದುರುತ್ತಾರೆ.

ಅಂಗೀರಸ ಋಷಿಗಳು ಅರ್ಪಿಸಿದಂತೆ ನೂತನ ಶ್ರೇಷ್ಠ ಸ್ತುತಿಗಳನ್ನು, ಶ್ರೇಷ್ಠ ಪುತ್ರರೊಡಗೂಡಿ ಯಜಮಾನನು ಇಂದ್ರನಿಗೆ ಅರ್ಪಿಸುತ್ತಾನೆ. ಇಂದ್ರನು ತಿರಸ್ಕರಿಸದಿರಲಿ. ಅಸುರ 'ತ್ರಿಪಿ'ಯನ್ನು ಕೊಂದ. ವೃತ್ರನಿಂದ ಮೋಡಗಳನ್ನು ಬಿಡಿಸಿದ, ಇಂದ್ರನಶರೀರ, ವೃದ್ಧಿಗೊಳ್ಳಲಿ.

ಯಜಮಾನನಿಗೆ ಪೂಜನೀಯ ಧನ, ಶರೀರ ಪೋಷಣೆ, ಅನ್ನಸಂಪತ್ತು ಗೌರವಸಂಪತ್ತುಗಳನ್ನು, ಕರ್ಮಗಳಿಗೆ ತಕ್ಕ ಪ್ರತಿಫಲವಾಗಿ, ದಕ್ಷಿಣೆಯಾಗಿ ಕೊಡಲಿ.

**ಸೂಕ್ತ - 18 (ಪ್ರಾತಾ ರಥೋ ನವೋ ಯೋಜಿ.....**

ಋಷಿ ಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ನಾಲ್ಕುಬಗೆಯ ಋತ್ವಿಕ್‌ರಿಂದ, ಮಂದ್ರ, ಮಧ್ಯಮ, ತಾರಕ, ಧ್ವನಿಯಲ್ಲಿ ಧ್ಯಾನಾತ್ಮಕ ವೇದಘೋಷಗಳು, ಸಪ್ತ ಛಂದಸ್ಸುಗಳಲ್ಲಿ ಯಾಗದಲ್ಲಿ ನಡೆದಿದೆ. ಇಷ್ಟಾರ್ಥಪ್ರದ ಜಯಶಾಲಿ [illegible]

ಋಷಿಪ್ರೋಕ್ತ ಪಾತ್ರೆಯಲ್ಲಿ ಶೇಖರಿತವಾದ ಸೋಮವು ಅನೇಕ ಹೆಸರಿಂದ ಕರೆಯಲ್ಪಡುವ ಇಂದ್ರನಿಗಾಗಿ ಸಿದ್ಧವಾಗಿದೆ. ನೂರಾರು ಸಂಖ್ಯೆಯಲ್ಲಿ ಕುದುರೆಗಳು ವೇದಾತ್ಮಕ ಸೂಕ್ತಗಳಿಂದ ಸ್ತುತಿಗೆ ಅಭಿಮುಖರಥಕ್ಕೆ, ಇಂದ್ರನ ಸುಖಸಂಚಾರಕ್ಕಾಗಿ ಹೂಡಲ್ಪಟ್ಟಿವೆ.

ಇಂದ್ರನು ಬೇರೆಯಜ್ಞಗಳಿಗೆ ಹೋಗದೇ, ಈ ಯಜ್ಞಕ್ಕೆ ಹಿಂಸೆಮಾಡದೇ, ಸೋಮಪಾನಕ್ಕೆ ಬರಲಿ. ಸೋಮಪಾನದಿಂದ ತೃಪ್ತನಾಗಿ, ಯಜಮಾನನು ಪುತ್ರರಿಂದ ಒಡಗೂಡಿ ಪಠಿಸುವ ಸ್ತುತಿಯನ್ನು ತಿರಸ್ಕರಿಸದೇ ಸ್ವೀಕರಿಸಲಿ.

ಯಜಮಾನನೊಂದಿಗೆ ಇಂದ್ರನ ಸಖ್ಯ ದೂರಾಗದಿರಲಿ. ಆಪತ್ತುಗಳು ತಪ್ಪಲಿ. ಇಂದ್ರಬಾಹುರಕ್ಷಣೆಯಲ್ಲಿ ಪ್ರತಿಯುದ್ಧದಲ್ಲೂ ಯಜಮಾನನಿಗೇ ಜಯದೊರಕಲಿ. ಧನಸಂಪತ್ತು ಯಜಮಾನನಿಗೆ ದಕ್ಷಿಣಾಪೂರ್ವಕವಾಗಿ ದೊರೆಯಲಿ.

**ಸೂಕ್ತ - 19 (ಅಪಾಯ್ಯಸ್ಯಾನ್ಧಸೋ ಮದಾಯ.....**

ಋಷಿ ಗೃತ್ಸಮದರು ಇಂದ್ರ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಇಂದ್ರನು ಏತಶರಾಜನ ಯಜ್ಞದಲ್ಲಿ ಸ್ತುತಿಸಲ್ಪಟ್ಟವನಾಗಿ, ಸೂರ್ಯನು ಏತಶನಿಗೆ ಸಮ್ಮನಾಗಿರುವಂತೆ ಮಾಡಿದನು. ಸೂರ್ಯನನ್ನು ಸೃಷ್ಟಿಸಿದ ಇಂದ್ರನೇ ತನ್ನ ತೇಜಸ್ಸಿಂದ ದಿನದ ಪ್ರಕಾಶವನ್ನುಂಟುಮಾಡಿದನು. ಮೇಘವನ್ನು ವಜ್ರಾಯುಧದಿಂದ ಸೀಳಿದಾಗ ಉಂಟಾದ ನದೀ ಪ್ರವಾಹವು, ಸಮುದ್ರಾಭಿಮುಖ ಹರಿವಂತೆ ಮಾಡಿದನು. ಇಂದ್ರ ಹಾಗೂ ಸ್ತುತಿಕರ್ತರ ನಿವಾಸಗಳು ಮದಕರ, ಹರ್ಷತರುವ ಸೋಮರಸದಲ್ಲೇ ಇದ್ದು, ಆ ಅನ್ನದಿಂದಲೇ ಇಂದ್ರನು ವೃದ್ಧಿಗೊಳ್ಳುತ್ತಾನೆ.

ಪಣಿ ಅಪಹೃತ ಗೋವುಗಳನ್ನು ಹಿಂದಕ್ಕೆ ತಂದವನು, ವೃತ್ರನನ್ನು ಕೊಂದವನು, 'ಪೀಯ'ನೆಂಬ ದೈವಭಕ್ತನಲ್ಲದ ಅಸುರನನ್ನು ಕೊಲ್ಲಲು, ವಜ್ರಾಯುಧ ಪ್ರಯೋಗಿಸಿದವ ಇಂದ್ರನೇ. ದಿವೋದಾಸನಿಗಾಗಿ ಶಂಬರನ ತೊಂಭತ್ತೊಂಬತ್ತುಪಟ್ಟಣ ನಾಶಮಾಡಿ, ತನ್ನ ಸಾರಥ್ಯ ನಡೆಸುವ ಕುತ್ಸರಾಜನಿಗೆ ಅಸುರರಾದ ಅತುಷ, ಕುವಯ, ಶುಷ್ಣರುಗಳನ್ನು ಅಧೀನರಾಗುವಂತೆ ಮಾಡಿದನು.

ಇಂದ್ರನನ್ನು ಬಲಶಾಲಿಯನ್ನಾಗಿ ಮಾಡಲು, ಇಂದ್ರಸಖ್ಯ ಹಾಗೂ ಅನ್ನ ಪಡೆಯಲು ಇಚ್ಛಿಸಿ ಯಜಮಾನರು ಆತ್ಮಪ್ರೇರಣೆಯಿಂದ ರಚಿಸಿದ ಸ್ತೋತ್ರಗಳನ್ನು ಅರ್ಪಿಸುತ್ತಾರೆ. ಮನನೀಯ ಸ್ತೋತ್ರಗಳನ್ನು ತಿರಸ್ಕರಿಸದೆ ಯಜಮಾನ ಋಷಿಗೃತ್ಸಮದರಿಗೆ ಶ್ರೇಷ್ಠ ಗೃಹ, ಅನ್ನಬಲಸುಖ ಇಷ್ಟಾರ್ಥಪ್ರದ ಧನ ಸಂಪತ್ತನ್ನು ದಕ್ಷಿಣಾಪೂರ್ವಕವಾಗಿ ಪೂರೈಸಲಿ. ಯಜ್ಞದಲ್ಲಿ ಪ್ರಭೂತ ಸ್ತೋತ್ರ ಪಠಿಸುವವರೆಲ್ಲರಿಗೂ, ಇಂದ್ರನು ತಿರಸ್ಕರಿಸದೆ ಧನಗಳನ್ನೂ ಕೊಡಲಿ.

**ಸೂಕ್ತ - 20 (ವಯಂ ತೇ ವಯ ಇನ್ದ್ರ ವಿದ್ಧಿ ಷು.....**

ಋಷಿ ಗೃತ್ಸಮದರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಂಗೀರಾ ಋಷಿಗಳಿಂದ ಸ್ತುತಿಗೊಂಡ ಇಂದ್ರನು ವೃದ್ಧಿಯಾಗಿ ಸೂರ್ಯ ಹಾಗೂ ಉಷಸ್ಸುಗಳಿಂದ ಕಾಂತಿ ಅಪಹರಿಸಿದ. ಮಾನವಿಗಾಗಿ ಪೃಥ್ವಿ ಹಾಗೂ ಉದಕವನ್ನು ಸೃಷ್ಟಿಸಿದ.

ಆಶ್ರಯಿಸಿರುವವರಿಗೆ ಹಾಗೂ ಹವಿರರ್ಪಿಸುವವರಿಗೆ ಶತ್ರುದಮ, ಶತ್ರುನಿವಾರಕನಾಗಿ ರಕ್ಷಕನಾಗಿ ಈಶ್ವರನಾಗಿ ಇದ್ದಾನೆ.

ಪಣಿಗಳಿಂದ ಅಪಹೃತ ಗೋವುಗಳ ಮಾರ್ಗತೋರಿದ, ಅಸುರ ಅಶ್ನಿಯನ್ನೂ ಅವನ ಪುರಾತನ ಪಟ್ಟಣವನ್ನೂ ನಾಶಮಾಡಿದ, ದಾಸನೆಂಬ ಅಸುರನ ಶಿರ ಉರುಳಿಸಿದ, ನಿಕೃಷ್ಟಜಾತಿಯ ಅಸುರ ಸೇನೆ ಓಡಿಸಿದ, ವೃತ್ರ ಹಾಗೂ ಇತರ ಎಲ್ಲಾ ಅಸುರರನ್ನೂ ವಜ್ರಾಯುಧದಿಂದ ಇಂದ್ರನೇ ನಾಶಪಡಿಸಿದನು.

ಯಜಮಾನನು ಬಲವರ್ಧಕ ಸೂಕ್ತಗಳನ್ನೂ, ಹವಿಸ್ಸುಗಳನ್ನೂ ಮೂರು ಸವನಗಳಲ್ಲಿಯೂ ಶತ್ರುಹಿಂಸಿಸುವಾಗಲೂ ಅರ್ಪಿಸುತ್ತಾರೆ. ಇಂದ್ರನು ಸ್ತುತಿಕರ್ತರ ಭಕ್ತಿ ತಿಳಿದು, ಅವನ ಸ್ತುತಿತಿರಸ್ಕರಿಸದೆ ಇಷ್ಟಾರ್ಥ ಪೂರೈಸಲಿ.

ಕರ್ಮನಿರತ, ಹವಿಸ್ಸನ್ನು ಪಕ್ವಮಾಡುವ, ಸಾಮ ಪಠಿಸುವ ಕರ್ಮ ನೇತೃ ಸ್ತುತಿಕರ್ತರಿಗೆ ಸುಖ ಅನ್ನ ಕೊಡಲು ಸಂಪತ್ಪೂರಿತ ದಕ್ಷಿಣೆಯನ್ನು ಪೂರೈಸಲಿ.

**ಸೂಕ್ತ - 21 (ವಿಶ್ವಜಿತೇ ಧನಜಿತೇ ಸ್ವರ್ಜಿತೇ ಸತ್ರಾಜಿತೇ.....**

ಋಷಿ ಗೃತ್ಸಮದರು ಇಂದ್ರದೇವನನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವಿಶ್ವಕ್ಕೆ ಸ್ವರ್ಗಕ್ಕೆ ಧನಕ್ಕೆ ಪ್ರಭುವಾದ ಇಂದ್ರನು ಮಾನವ ಹೃದಯ ಜಯಿಸಿದವ. ಪೃಥ್ವಿ, ಗೋ ಉದಕಗಳನ್ನು ಜಯಿಸಿದವ. ಉಷಸ್ಸಿನ ಸೂರ್ಯಾತ್ಮಕ ಜ್ಯೋತಿ ಸೃಷ್ಟಿಸಿದವ.

ಸ್ತುತಿಸುವವರು, ಸಹಾಯ ಅಪೇಕ್ಷಿಸುವವರು, ರಕ್ಷಣೆ ಅಪೇಕ್ಷಿಸುವವರೂ, ಇಂದ್ರನಿಂದ ಗೋರೂಪ ಧನ ರಕ್ಷಣೆ ಪಡೆಯುತ್ತಾರೆ.

ಇತರರಿಗೆ ಹಿಂಸೆಯಾಗದಂತೆ ಬಲಶಾಲಿ ಶತ್ರುಗಳನ್ನು ಸೋಲಿಸುವ ಇಂದ್ರನೇ, ತಪಸ್ವಿ ಅಂಗೀರಸ್ಸುಗಳು ಕಳೆದುಕೊಂಡಿದ್ದ ಗೋವುಗಳ ಮಾರ್ಗವನ್ನು ತಿಳಿಸಿದ.

ಇಂದ್ರನಿಗಾಗಿ ಸೋಮ ಸಂಪಾದಿತವಾಗಲಿ, ಪ್ರೀತಿಯಿಂದ ಇಂದ್ರನು ಸೋಮ ಸ್ವೀಕರಿಸಲಿ. ಯಜಮಾನನು ಇಂದ್ರಾದಿಗಳನ್ನು ಪೂಜಿಸುವ ಶ್ರೇಷ್ಠತೆ ಪಡೆಯಲಿ.

ಯಜಮಾನ ಹಾಗೂ ಅವನ ಪುತ್ರರೂ, ಶರೀರಕ್ಕೆ ಅಹಿಂಸಾತ್ಮಕ ಸುಖ, ಉತ್ತಮ ಧನ ಪ್ರಖ್ಯಾತ ಸೌಭಾಗ್ಯ ಸಮೃದ್ಧಿಗಳನ್ನು ಪಡೆಯುವಂತಾಗಲಿ.

**ಸೂಕ್ತ - 22 (ತ್ರಿಕದ್ರುಕೇಷು ಮಹಿಷೋ.....**

ಋಷಿ ಗೃತ್ಸಮದರು ಇಂದ್ರದೇವನನ್ನು ಅಷ್ಟಿಃ ಅತಿಶಕ್ವರೀ, ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

'ತ್ರಿಕದ್ರುಕ' ಹವಿಸ್ಸನ್ನು ವಿಷ್ಣುವಿನೊಂದಿಗೆ ಇಂದ್ರನು ತೃಪ್ತಿಯಿಂದ ಸೇವಿಸಿದನು. ಸೋಮವು ಶರೀರವನ್ನೆಲ್ಲಾ ವ್ಯಾಪಿಸಿ ಇಂದ್ರನನ್ನು ಸೋಮಕಾಯನನ್ನಾಗಿ ಮಾಡಿತು. ಸೋಮದ

ಬಲಪರಾಕ್ರಮಗಳಿಂದ ಪ್ರವೃದ್ಧನಾಗಿ ಇಂದ್ರನು ಅಸುರರ ಪ್ರಾಣ ಹಿಂಡುತ್ತಾ, ಸಜ್ಜನರನ್ನು ವಿಭಾಗಿಸಿ, ವಿಶ್ವದ ಭಾರವಹಿಸುತ್ತಾನೆ. ಅಸುರ 'ತ್ರಿವಿ'ಯನ್ನು ಸೋಲಿಸಿದ ಇಂದ್ರನು ದ್ಯಾವಾಪೃಥ್ವಿಗಳನ್ನು ತೇಜಸ್ಸಿಂದ ತುಂಬಿದನು. ಉದಕ ಪ್ರವಹಿಸುವಂತೆ ಮಾಡಿ, ಅತಿಶಯ ಹೊಗಳಿಕೆಗೆ ಪಾತ್ರನಾದನು.

ವಿಶ್ವವ್ಯಾಪಿ ಇಂದ್ರನು, ಕರ್ಮರೂಪಿ ಅಸುರರನ್ನು ಸೋಲಿಸಿ, ಯಜಮಾನರಿಗೆ ಕಾರ್ಯಸಾಧಕ ಧನ ಅನ್ನ ಬಲಗಳನ್ನು ಕೊಟ್ಟು, ಸಕಲರಿಗೂ ಹರ್ಷತರಲಿ.

## ಸೂಕ್ತ - 23 (ಗಣಾನಾಂತ್ವಾ ಗಣಪತಿಂ ಹವಾಮಹೇ.....

ಋಷಿ ಗೃತ್ಸಮದರು ಬ್ರಹ್ಮಣಸ್ಪತಿ ಮತ್ತು ಬೃಹಸ್ಪತಿ ದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಬ್ರಹ್ಮಣಸ್ಪತಿದೇವನು ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟವನು, ಕರ್ಮಗಳಿಗೆ ಪ್ರಭು, ದೇವಸಂಬಂಧಿ, ಜಗನ್ನಿಯಾಮಕ, ಸ್ವರ್ಗದೊಡೆಯ, ಅತ್ಯುತ್ತಮ ಕ್ರಾಂತಿಕವಿ, ಅಪರಿಮಿತ ಅನ್ನಉಳ್ಳವ, ಶ್ಲಾಘ್ಯರ ನಡುವೆ ಪ್ರಕಾಶಿತ, ಮಂತ್ರಗಳ ಒಡೆಯ, ಅದ್ವಿತೀಯ ದಾತೃ, ಸಾಮವೇದಕರ್ತ, ಸತ್ಯಾತ್ಮಕ, ಪರಾಕ್ರಮಿ ಕೃತಜ್ಞತಾಭಾವ ಬೀರುವವ, ಯಜಮಾನರಿಗೆ ಉಪಕಾರ ಮಾಡುವವ, ಋಣಪರಿಹಾರಕ ಋಣವಿಮೋಚಕ.

ಬ್ರಹ್ಮಣಸ್ಪತಿಯು ವೃದ್ಧಿಗೊಳಿಸುವ ಸಹಾಯದಿಂದಲೇ, ಅಪೇಕ್ಷಿತ ಧನಗಳನ್ನು ದಾನವಾಗಿ ಮಾನವ ಪಡೆಯುತ್ತಾನೆ. ಬ್ರಹ್ಮಣಸ್ಪತಿಯು ಕಾಪಾಡುವವರನ್ನು ಪಾಪಬಾಧಿಸುವುದಿಲ್ಲ.

ದುಷ್ಟಶಕ್ತಿಯ ಶತ್ರು ಎಷ್ಟೇ ಭಯಂಕರನಾಗಿದ್ದರೂ, ಅಂತಹವರ ಸಮೂಹವನ್ನೂ, ದುಃಖ, ಹಿಂಸೆಗಳನ್ನೂ ಕೊಡುವ ದ್ರೋಹಿ ಅಸುರರನ್ನೂ ಸೋಲಿಸಿ ಹಿಂಸಿಸಿ ವಧಿಸುತ್ತಾನೆ.

ಪುತ್ರಪೌತ್ರಾದಿಗಳೊಂದಿಗೆ ಸ್ತೋತ್ರ ಪಠಿಸುವ ಯಜಮಾನರಿಗೆ ಬ್ರಹ್ಮಣಸ್ಪತಿ ಹಾಗೂ ಸದೃಶದೇವತೆಗಳು ಕೊಡುವ ರಕ್ಷಣೆ ಕಲ್ಯಾಣಾತ್ಮಕವಾಗಿದೆ.

ಕರ್ಮನಿಮಿತ್ತ, ಬ್ರಹ್ಮಣಸ್ಪತಿಯನ್ನು ಯಜಮಾನರು ಯಜ್ಞಕ್ಕೆ ಕರೆಯುತ್ತಾರೆ. ಬ್ರಹ್ಮಣಸ್ಪತಿಯು ಸ್ತುತಿಸ್ವೀಕರಿಸಲಿ. ಯಜ್ಞಕ್ಕೆ ಬಂದು ಕುಳಿತುಕೊಳ್ಳಲಿ. ಪುತ್ರಪೌತ್ರಾದಿಗಳನ್ನು ಸಂತೋಷಗೊಳಿಸಲಿ. ಯಜಮಾನರನ್ನು ಸೋಲಿಸುವ ಶತ್ರುನಾಶಮಾಡಿ, ಯಜಮಾನರಿಗೆ ರಕ್ಷಣೆಕೊಡಲಿ.

ಬೃಹಸ್ಪತಿದೇವನು ಅಂಗೀರಸ ವಂಶೋತ್ಪನ್ನ ಜ್ಞಾನಿ, ಶಾಂತ, ಕಾಮಪೂರಿತ, ಮಹಿಮಾವಂತ ಮಾರ್ಗದರ್ಶಕ, ಸರ್ವಜ್ಞ ಸತ್ಯೋತ್ಪನ್ನ.

ಹವಿಸ್ಸನ್ನು ಅರ್ಪಿಸುವವರನ್ನು ಇಚ್ಛಿಸುವ, ಪ್ರೀತಿಯಿಂದ ಉತ್ತೇಜನ ವಾಕ್ಯಮಾಡುವ, ಮಾನವನನ್ನು ಸನ್ಮಾರ್ಗಕ್ಕೆ ತರುವ, ಶ್ರೇಷ್ಠಮಾರ್ಗ ತಿಳಿಸುವವ, ಪುತ್ರರನ್ನು ರಕ್ಷಿಸುವ ಬೃಹಸ್ಪತಿಯು, ಉಪದ್ರವಗಳಿಂದ ಆಪತ್ತುಗಳಿಂದ ರಕ್ಷಿಸಿ, ಯಜಮಾನನಲ್ಲಿಯೇ ಇದ್ದು, ಸದುಪದೇಶದಿಂದ

ವೀರ್ಯವಂತ ಬೃಹಸ್ಪತಿಯೇ ನಮಸ್ಕಾರಗಳಿಗೆ ಒಳಗಾಗುವವ, ಸಂಗ್ರಾಮಗಳಲ್ಲಿ ಸಹಾಯಕ್ಕೆ ಬರುವವ, ಸಹಾಯಕ್ಕೆ ಕರೆಯಲ್ಪಡುವವನೂ ಆಗಿದ್ದಾನೆ.

ಶತ್ರುಭಯಂಕರನಾಗಿ, ಶತ್ರುಹಿಂಸಕನಾಗಿ, ಮಂತ್ರದ್ವೇಷಿಗಳನ್ನು ದಹಿಸುತ್ತಾ, ಕ್ರೋಧಿಗಳನ್ನು ದಂಡಿಸುತ್ತಾ ಇರುವ ವೀರ್ಯವಂತ ಬೃಹಸ್ಪತಿ ವೃತ್ರವಧೆ ಮಾಡಿ ಉದಕಪ್ರವಾಹ ಅಧೋಮುಖಿ ಹರಿವಂತೆ ಮಾಡಿದ, ವಲನು ಅಪಿತಿಷ್ಟ ಪರ್ವತದ ದಾರಿಬಿಡಿಸಿ ಗೋ ಬಂಧನ ಬಿಡಿಸಿದ. ಪಾಪಿನಿಂದಕರನ್ನು ಶಿಕ್ಷಿಸುವ ವೀರ್ಯವಂತ.

ಹವಿಸ್ಸನ್ನು ಅರ್ಪಿಸುವವರಿಗೆ ಪಾಪಗಳು ಅಂಟುವುದಿಲ್ಲ, ಸಂಪತ್ತಿಗಿಂತಲೂ ಅಧಿಕವಾಗಿ ಪೂಜಿಸುವವರನ್ನು ಕಾಂತಿಯುತರಾಗಿ ಆಶ್ರಯಿಸುವವರನ್ನೂ ಚೈತನ್ಯಯುತರನ್ನಾಗಿ ಬ್ರಹ್ಮವರ್ಚಸ್ವಿಗಳನ್ನಾಗಿ ಮಾಡುತ್ತಾನೆ.

ಬೃಹಸ್ಪತಿಯನ್ನು ಯಜಮಾನನು ಯಾಗಕ್ಕೆ ಸ್ತೋತ್ರಗಳಿಂದ ಪ್ರಾರ್ಥಿಸಿ ಆಹ್ವಾನಿಸುತ್ತಾನೆ.

ಬೃಹಸ್ಪತಿಯು, ಚೋರ, ದ್ರೋಹಿ, ದುರಾಸೆಯ, ನಾಸ್ತಿಕ ಹಾಗೂ ಅವರ ನಾಶಕ ಶಕ್ತಿಯನ್ನು ತಿಳಿದು ಅವರಿಗೆ ನಮ್ಮನ್ನು ವಶಮಾಡದಿರಲಿ. ಕೊಲ್ಲಲಿಚ್ಛಿಸುವ ಶತ್ರುವಿನ ಆಯುಧ ನಮ್ಮನ್ನು ಸಮೀಪಿಸದಿರಲಿ. ಮೋಸಮಾಡುವ ದುಷ್ಟನು ಅವನ ಶಕ್ತಿ ದುರ್ಬುದ್ಧಿಗಳಿಂದಲೇ ನಾಶಗೊಳ್ಳಲಿ. ನಿರಪರಾಧಿಗಳನ್ನು ಹಿಂಸಿಸುವವರು ವೈದಿಕಮಾರ್ಗದಿಂದ ಹಿಂತಿರುಗಲಿ. ನಮ್ಮನ್ನು ಎದುರಿಸುವ ಶತ್ರು ಸೈನ್ಯರಥಗಳೂ ನಾಶವಾಗಲಿ, ಅವರ ಕ್ರೋಧವನ್ನು ನಾವು ಎದುರಿಸುವಂತಾಗಲಿ ಎಂದು ಯಜಮಾನನ ಪ್ರಾರ್ಥನೆ.

ಪರಾಕ್ರಮತಿಳಿದೂ, ನಿಂದಿಸುವ ಅಸುರರನ್ನು ದಹಿಸಿ ನಾಶಮಾಡಿ, ಬೃಹಸ್ಪತಿಯು ವೀರ್ಯಪ್ರಕಟಿಸಲಿ. ಅಸುರೀಸ್ವಭಾವದ ಹಿಂಸಕ ಭಯಂಕರ ಪಾಪಬುದ್ಧಿಯ ದುಷ್ಟಬುದ್ಧಿಯ, ಕೆಳಕ್ಕೆತಳ್ಳುವಂತಹವರು, ಯಜಮಾನನ ಮೇಲೆ ಪ್ರಭುತ್ವಮಾಡದಂತಾಗಲಿ.

ಪ್ರಶಸ್ತ ವ್ಯವಹಾರದಿಂದ ಯಜಮಾನರು ವೃದ್ಧಿಹೊಂದುವಂತಾಗಲಿ.

## (ಅಷ್ಟಕ - 2, ಅಧ್ಯಾಯ - 7)

### ಸೂಕ್ತ - 24 (ಸೇಮಾಮವಿಡ್ಢಿ ಪ್ರಭೃತಿಂ ಯ.....

ಋಷಿಗೃತ್ಸಮದರು ಬ್ರಹ್ಮಣಸ್ಪತಿ ಇಂದ್ರದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಬ್ರಹ್ಮಣಸ್ಪತಿಯು ಜಗತಪ್ರಭು, ಉತ್ಕೃಷ್ಟ ವೃಷ್ಟಿಪ್ರದ ಧನವಂತ ಅನ್ನವಂತ ರಮಣೀಯ ಮಂತ್ರದೊಡೆಯ ದೇವಪುರೋಹಿತ ಶ್ರೇಷ್ಠಸ್ತೋತ್ರ.

ಸಕಲ ಜನನಿಯಂತ್ರಕನಾಗಿ, ಸರ್ವತ್ರ ವಿಧವ್ಯಾಪಿಯಾಗಿ, ಸಂಗ್ರಾಮಸಹಾಯಕನಾಗಿದ್ದಾನೆ. ಬೇಕಾದಾಗ ಒಟ್ಟುಗೂಡಿಸುವ, ಹಾಗೂ ಒಟ್ಟಾಗಿರುವದನ್ನು ಬೇರೆಮಾಡುವವ, ಉತ್ಕೃಷ್ಟ ಹಾಗೂ ನಿಕೃಷ್ಟ ಭಕ್ತರನ್ನುದ್ಧರಿಸುವವನು.

ಬ್ರಹ್ಮಣಸ್ಪತಿಯು ಮೇಘಸೀಳಿ ವೃಷ್ಟಿಸುರಿಸಿ, ಅಂಧಕಾರ ಓಡಿಸಿ, ಆದಿತ್ಯನನ್ನು ಪ್ರಕಾಶಪಡಿಸುತ್ತಾನೆ. ಮಂತ್ರ ಪಠಣದಿಂದ ಜ್ಞಾನಕರ್ಮನೆರವೇರಿಸಿದಾಗ ಮೇಘದಿಂದಾದ ಉದಕವು, ಬೇಸಗೆಯಲ್ಲಿರಶ್ಮಿಗಳಿಂದ ಹೀರಲ್ಪಟ್ಟು, ವರ್ಷಾಕಾಲದಲ್ಲಿ ಪುನಃ ವೃಷ್ಟಿಸುತ್ತವೆ, ವರ್ಷಾವಧಿಕಾಲ ಉದಕವುಹರಿದ ಪೃಥ್ವಿಯ ಉದಕವನ್ನು ದ್ಯುಲೋಕದಿಂದಲೂ, ದ್ಯುಲೋಕವು ಹವಿರೂಪ ಅನ್ನವನ್ನು ಪೃಥ್ವಿಯಿಂದಲೂ ಉಪಭೋಗಿಸುತ್ತವೆ.

ಶ್ರೋತ್ರೇಂದ್ರಿಯ ಗ್ರಾಹ್ಯ ಜ್ಞಾನಾತ್ಮಕ ಬಾಣಗಳು, ಅಂತರಿಕ್ಷಗುರಿಯನ್ನು ಸಾಧಿಸಿ, ಅಸುರರನ್ನು ಉರುಳಿಸುತ್ತದೆ. ಸಕಲಭೂತ ಜಾತಗಳಿಗಿಂತಲೂ ಅಧಿಕನಾದ ಬ್ರಹ್ಮಣಸ್ಪತಿ ದತ್ತ ಅನ್ನಧನಗಳನ್ನು ದೇವತೆಗಳೂ ಮಾನವರೂ ಉಪಭೋಗಿಸುವರು.

ಸತ್ಯಯುಕ್ತ ಸರ್ವಜ್ಞ ಅಂಗೀರಸರು, ಗೋವುಗಳನ್ನು ಅಡಗಿಸಿದ್ದ ಪರ್ವತ ತಲುಪಿ ಹಿಂದಿರುಗುವಾಗ, ತಮ್ಮಿಂದ ಮಥಿಸಲ್ಪಟ್ಟ ಅಗ್ನಿಯನ್ನು ಪರ್ವತದ ಮೇಲೆ ಸ್ಥಾಪಿಸಿದರು. ಅದುವರೆಗೂ ಅಲ್ಲಿ ಅಗ್ನಿ ಇರಲಿಲ್ಲ. ಬ್ರಹ್ಮಣಸ್ಪತಿಯು ಆ ಗೋವುಗಳನ್ನು ವಿಭಾಗಮಾಡಿ ದೇವತೆಗಳ ವಶಮಾಡಿ, ವಲನನ್ನು ಚೆದರಿಸಿ ನಾಶಮಾಡಿದ.

ಮಹತ್ತಾದ ಕರ್ಮಗಳು ಮಂತ್ರಗಳಿಂದ ಮಹತ್ಫಲ ಉಳ್ಳದ್ದಾಗಿ ಅಪೇಕ್ಷಿತಾರ್ಥಗಳನ್ನು ಒದಗಿಸುತ್ತವೆ. ಬ್ರಹ್ಮಣಸ್ಪತಿಯು ಉಪಚರಿತ ಸ್ತುತಿಮಂತ್ರಗಳನ್ನು ಸ್ವೀಕರಿಸಲಿ. ಅವನ ಅಶ್ವಗಳೂ ಸ್ತುತಿಕೇಳಲಿ, ಗೋವಿನಿಂದ ಉತ್ಪನ್ನಗಳನ್ನು ಸ್ವೀಕರಿಸಲಿ.

ಯಜಮಾನರು ಯಜ್ಞದಲ್ಲಿ ಪ್ರೌಢಸ್ತೋತ್ರ ಪಠಿಸುವಂತೆ, ಸಕಲದಿನಗಳಲ್ಲೂ ಅನ್ನ ಮತ್ತು ಶ್ರೇಷ್ಠ ಧನಕ್ಕೆ ಅಧಿಪತಿಗಳಾಗಿರುವಂತೆ, ಅವರ ವೀರಪುತ್ರರು ಉತ್ಪನ್ನವಾಗುವಂತೆ, ಸಕಲ ಕಲ್ಯಾಣಗಳೂ ಆಗುವಂತೆ ಆಗಲಿ.

ಸತ್ಯಾತ್ಮಕ ಸ್ತೋತ್ರಗಳೆಲ್ಲಾ ಇಂದ್ರ ಮತ್ತು ಬ್ರಹ್ಮಣಸ್ಪತಿಗಳದ್ದೇ. ಉದರಾಶ್ರಯಭೂತಗಳು ಇವರ ಕರ್ಮ ಮೀರುವುದಿಲ್ಲ. ಇವರುಗಳು ಯಜಮಾನನ ಯಜ್ಞದಲ್ಲಿ ಹವಿಸ್ಸಿಗಭಿಮುಖವಾಗಿ ಬರಲಿ.

## ಸೂಕ್ತ - 25 (ಇಂಧಾನೋ ಅಗ್ನಿಂ ವನವದ್ವನುಷ್ಯತಃ.....

ಋಷಿ ಗೃತ್ಸಮದರು ಬ್ರಹ್ಮಣಸ್ಪತಿದೇವನನ್ನು ಜಗತೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಬ್ರಹ್ಮಣಸ್ಪತಿಯು ನದೀಪ್ರವಾಹ ಹರಿಸುವವ, ಛಿದ್ರವಿಲ್ಲದ ಶಾಶ್ವತ ದೇವದತ್ತ ಸುಖ, ಗೃಹ, ಕೊಡುವವ, ಶತ್ರುಗಳಿಂದ ಸೋಲಿಸಲಾಗದಂತಹ ಶಕ್ತಿದಾತ. ತಡೆಯಿಲ್ಲದ ವೃದ್ಧಿ ಗೋಧನ ಕೊಡುವವ.

ಬ್ರಹ್ಮಣಸ್ಪತಿಯನ್ನು ಸಖನನ್ನಾಗಿ ಮಾಡಿಕೊಂಡ ಯಜಮಾನನು ಹಿಂಸಕ ಶತ್ರುಗಳನ್ನು ತನ್ನ ಬಲದಿಂದಲೇ ಸುತ್ತುವರೆದು ಅವರನ್ನೂ ಅವರ ಪುತ್ರರನ್ನೂ ಹಿಂಸಿಸಿ ಓಡಿಸಲು ಇಚ್ಛಿಸುತ್ತಾನೆ.

ಬ್ರಹ್ಮಣಸ್ಪತಿಯಿಂದ, ಅಗ್ನಿಜ್ವಾಲೆಯಂತಹ, ತಡೆಯಲಾಗದ ವೃದ್ಧಿಯನ್ನೂ ವೀರ ಪುತ್ರರನ್ನೂ, ಸಕಲ ಧನಾದಿಗಳನ್ನೂ, ಸಂತೋಷ, ದೀರ್ಘಾಯುಗಳನ್ನೂ ಪಡೆಯುತ್ತಾನೆ.

**ಸೂಕ್ತ - 26 (ಋಜುರಿಚ್ಛಂಸೋ ವನವದ್ವನುಷ್ಯತೋ.....**

ಋಷಿ ಗೃತ್ಸಮದರು ಬ್ರಹ್ಮಣಸ್ಪತಿ ದೇವನನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಬ್ರಹ್ಮಣಸ್ಪತಿ ದೇವನು ಯಜಮಾನರಿಗೆ ಅವರ ಸಕಲ ಸಂಬಂಧಿ ಪ್ರಜಾಪುತ್ರರುಗಳಿಗೆ, ಅನ್ನ ಧನವನ್ನು ಕೊಡುತ್ತಾನೆ. ಹಿಂಸಾತ್ಮಕ ಶತ್ರುಗಳನ್ನು ದೈವಭಕ್ತರಲ್ಲದವರನ್ನೂ, ಸಂಗ್ರಾಮದಲ್ಲಿ ಸೋಲಿಸಲಾಗದವರನ್ನೂ ಜಯಿಸುತ್ತಾನೆ. ಯಾಗರಹಿತರ ಧನವನ್ನು ಯಜಮಾನರಿಗೆ ಕೊಟ್ಟು ಋಜುಮಾರ್ಗಗಳಿಂದ ಫಲಾಭಿಮುಖರಾಗುವಂತೆ ಮಾಡುತ್ತಾನೆ. ಪಾಪ, ದಾರಿದ್ರ್ಯ, ಶತ್ರುಗಳಿಂದ ರಕ್ಷಣೆ ಕೊಟ್ಟು ಕಾಪಾಡುತ್ತಾನೆ.

ಯಜಮಾನನು ಬ್ರಹ್ಮಣಸ್ಪತಿಯನ್ನು ಋಜುಬುದ್ಧಿಯಿಂದ ಶ್ರದ್ಧಾಮನಸ್ಸುಗಳಿಂದ ಚರುಪುರೋಡಾಶಗಳಿಂದ, ಆಜ್ಯಯುಕ್ತ ಹವಿಸ್ಸುಗಳಿಂದ ಸ್ತುತಿಗಳಿಂದ ಪೂಜಿಸಿ ಉಪಚರಿಸುತ್ತಾನೆ.

ಬ್ರಹ್ಮಣಸ್ಪತಿಯು ಯಜಮಾನನಿಗೆ ಕಲ್ಯಾಣ ಮನಸ್ಸು ಕೊಟ್ಟು ಉಪಕರಿಸಲಿ.

**ಸೂಕ್ತ - 27 (ಇಮಾ ಗಿರ ಆದಿತ್ಯೇಭ್ಯೋ.....**

ಕೂರ್ಮೋ ಗಾತ್ಸಮರ್ದೋ ಗೃತ್ಸಮದ ಋಷಿಗಳು ಆದಿತ್ಯದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಆದಿತ್ಯನು ತೇಜಸ್ವಿ ಪೋಷಕ, ಶಾಶ್ವತ, ಪ್ರಖ್ಯಾತ, ಸತ್ಯವಂತ, ಯುದ್ಧನೇತೃ, ಅನ್ನದಾತ ಪ್ರಶಂಸಿತ ಲೋಕರಕ್ಷಕ ಪ್ರಕಾಶಮಾನ ನಿರ್ಮಲರೂಪಿ, ಐಶ್ವರ್ಯೋಪೇತ ಗಾಂಭೀರ್ಯಯುತ ಮಹತ್ಸ್ವರೂಪಿ ಹಿರಣ್ಮಯ ಪ್ರಕಾಶಕ.

ಆದಿತ್ಯನು ಮಾನವ ಹೃದಯದಲ್ಲೇ ಇದ್ದು ಪಾಪ – ಪುಣ್ಯ ತಿಳಿಯುತ್ತಾ ಋಣ ಪರಿಹರಿಸುತ್ತಾನೆ. ಅನೇಕರಿಂದ ಸ್ತುತಿತನಾಗಿ ದೂರದಲ್ಲೇ ಇದ್ದರೂ ಹತ್ತಿರದಲ್ಲೇ ಇರುವಂತೆ ಇರುತ್ತಾನೆ. ಧೀರ್ಘಪ್ರಜ್ಞೆಯ ಗುಣಯುಕ್ತನಾಗಿ, ಉದಕ ಶೇಖರಿಸಿ ರಕ್ಷಿಸುವವನಾಗಿ, ಪ್ರಾಣಿಗಳನ್ನು ಸ್ಥಾಪಿಸಿ ಧರಿಸುವವನಾಗಿದ್ದಾನೆ.

ಮಾನವಹಿತಕ್ಕಾಗಿ ಆದಿತ್ಯನು ಋಜುಬುದ್ಧಿಯಿಂದ ಅಗ್ನಿಯೇ ಆದಿಯಾಗಿ ಮೂರು ತೇಜೋಮಂಡಲಗಳನ್ನು ಧರಿಸಿ, ತ್ರಿಲೋಕ ಮಧ್ಯದಲ್ಲಿ ಉದಕಹೀರಿ, ಧರಿಸಿ, ವೃಷ್ಟಿಸಿ ತ್ರಿಕರ್ಮಗಳಿಂದ ಮಹಾತ್ಮನಾಗಿದ್ದಾನೆ. ಶ್ರೇಷ್ಠಧನ ಅಗಾಧವೃದ್ಧಿ ಸಂಗ್ರಾಮಜಯ, ಚರಾಚರಸೃಷ್ಟಿಕಾರ್ಯಕ್ಕೆ ಅನುಕೂಲ. ಅವರವರ ಸ್ಥಾನದಲ್ಲಿ ಯಜಮಾನ್ಯ ವಹಿಸಲು ದ್ಯಾವಾಪೃಥ್ವಿಗಳಿಗೆ ಅನುಕೂಲವಾಗುವಂತೆ ಆದಿತ್ಯನು ಇದ್ದಾನೆ.

ದೂರದ ಅಥವಾ ಹತ್ತಿರದ ಯಾರೂ ಆದಿತ್ಯನನ್ನು ಹಿಂಸಿಸಲಾರರು. ಚರುಪುರೋಡಾಶಗಳನ್ನು ಅರ್ಪಿಸುವವರಿಗೆ ವೃದ್ಧಿಉಂಟುಮಾಡಲು ಯಜ್ಞಗೃಹಕ್ಕೆ ಆದಿತ್ಯನು ಬರುತ್ತಾನೆ. ಆದಿತ್ಯನ ಮಾರ್ಗದರ್ಶನದಲ್ಲಿ ಮಾನವನು ಶುದ್ಧನಾಗಿ ಅನ್ನವಂತನಾಗಿ ಶ್ರೇಷ್ಠ ಪುತ್ರವಂತನಾಗಿ, ಸಸ್ಯಾದಿ ಬೆಳೆಗೆ ಅನುಕೂಲಮಾಡಿಕೊಡಲು ಉದಕಸಮೀಪದಲ್ಲೇ ವಾಸಿಸುತ್ತಾನೆ.

ಆದಿತ್ಯನು ತೇಜಸ್ಸಿನಿಂದ ಅಂಧಕಾರ ದೂರಮಾಡಿ, ಅಜ್ಞಾನ ಅಪಕ್ವಜ್ಞಾನ, ಅಂಧಕಾರದಿಂದ ಅಂಧನಾದವನಿಗೆ ಭಯರಹಿತ ನಿರ್ದಿಷ್ಟ ಮಾರ್ಗದರ್ಶನ ಮಾಡುತ್ತಾನೆ. ರಾಕ್ಷಸ, ಶತ್ರುಪಾಶ, ಮಾಯೆಗಳಿಂದ ಕಾಪಾಡುತ್ತಾನೆ.

ಪ್ರೌಢ ಸ್ತೋತ್ರಗಳಿಂದ ಸ್ತುತಿಸುವ ಯಜಮಾನರಿಗೆ ವಿಸ್ತಾರ ಸುಖಕರ ವಾಸಗೃಹ, ಅಭಯ, ರಾಕ್ಷಸಭಯ ನಾಶಮಾಡಿ, ಧನ ಶೂನ್ಯನಾಗದಂತೆ ಮಾಡಿ, ದಾನಿಗಳ ಮುಂದೆ ಪುತ್ರಾದಿಗಳೊಂದಿಗೆ ದಾರಿದ್ರ್ಯದಿಂದ ಬೇಡುವಂತಾಗದಂತೆ ಮಾಡುತ್ತಾನೆ.

ಪುತ್ರರೊಂದಿಗೆ ಪ್ರೌಢ ಸ್ತೋತ್ರಗಳಿಂದ ಯಜಮಾನನು ಸ್ತುತಿಸುತ್ತಾನೆ.

ದೇವಮಾತೆ ಅದಿತಿ, ಅವಳ ಪುತ್ರರಾದ ಮಿತ್ರ, ಅರ್ಯಮ, ವರುಣ, ದೇವತೆಗಳು ಯಜಮಾನನನ್ನು ಶತ್ರು ದ್ವೇಷದಿಂದ ದಾಟಿಸಿ, ದ್ವೇಷ ಇಲ್ಲದ ಸ್ಥಾನಕ್ಕೆ ಒಯ್ಯಲಿ.

ದಕ್ಷ, ಮಿತ್ರ, ಅರ್ಯಮ, ಭಗ, ಅಂಶುಮಾ ಇವರುಗಳಿಗಾಗಿ, ಜುಹುಪಾತ್ರೆಯಲ್ಲಿ ಘೃತ, ವಾಕ್‌ಸ್ತುತಿಗಳನ್ನು ಯಜಮಾನ ಅರ್ಪಿಸುತ್ತಾನೆ. ಸ್ತುತಿ ಕೇಳಿ ಪಾಪದಾಟಿಸಲಿ. ವೀರಪುತ್ರರೊಂಧಿಗೆ ಹಿಂಸಾರಹಿತರಾಗಿ ಶ್ರೇಷ್ಠಮಾರ್ಗದಲ್ಲಿ ಅಧಿಕಸುಖ ಪಡೆವಂತಾಗಲಿ. ಕಂಟಕರಹಿತ, ಮಾನವ ಪ್ರಸಿದ್ಧ ಪ್ರೀತಿಮಾತುಗಳಿಂದ ಶತ್ರುವು ನಾಶಗೊಳಿಸಲಾಗದ ಸುಖ ಕೊಡಲಿ.

ವರುಣನು ಅನೇಕ ಪ್ರದೇಶೋತ್ಪನ್ನ ಲೋಕೋಪಕಾರಿ, ನಿರ್ಮಲ, ಪ್ರಕಾಶಮಾನ ಭಕ್ತಾನುಗ್ರಹಿ. ಪಾಪರಹಿತ, ಕರ್ಮ ಪ್ರಜ್ಞೆಯುಳ್ಳವ ಯಾರಿಂದಲೂ ಹಿಂಸಿಸಲ್ಪಡದ ಶತ್ರುನಾಶಕ, ಸಕಲ ದೇವತೆಗಳೂ ಹಾಗೂ ಮಾನವರಿಗೂ ಪ್ರಭು ಯಜಮಾನನಿಗೆ ಶುಭ ಉಂಟುಮಾಡಲಿ.

ಹಿಂದೆ ಋಷಿಗಳು ಅನುಭವಿಸಿದಂತೆ ನೂರುವರ್ಷ ಆಯುಸ್ಸನ್ನು ಯಜಮಾನನು ಅನುಭವಿಸುವಂತಾಗಲಿ. ಅದಿತಿಮಿತ್ರಾವರುಣಾದಿಗಳಿಗೆ ಯಜಮಾನನಿಂದ ಏನೇ ಅಪರಾಧವಾಗಿದ್ದರೂ ಕ್ಷಮಿಸಿ ರಕ್ಷಿಸಲಿ.

### ಸೂಕ್ತ - 28 (ಇದಂ ಕವೇರಾದಿತ್ಯಸ್ಯ ಸ್ವರಾಜೋ.....

ಕೂರ್ಮೋ ಗಾರ್ತ್ಸಮದೋ ಗೃತ್ಸಮದ ಋಷಿ ವರುಣದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವರುಣದೇವನು ಸ್ವಯಂ ಪ್ರಕಾಶಪ್ರಭು, ಹರ್ಷಕಾರಕ, ಬಹುಪ್ರದೇಶೋತ್ಪನ್ನ, ಜಗತ ಕರ್ಮದರ್ಶಿ ಬಹುಜನಸ್ತುತಿತ ಅನೇಕ ವೀರ್ಯವಂತ, ದೇವತಾತ್ಮ, ಅಸುರರಿಂದ ಅಹಿಂಸಿತ.

ಪರ್ವತ ಉದಕಗಳನ್ನು ಸೃಷ್ಟಿಸಿದ ವರುಣನು, ಆಯಾಸವಿಲ್ಲದೇ ನದೀ ಪ್ರವಾಹಹರಿವಂತೆ ಮಾಡಿದ. ಭೂತಭೌತಗಳನ್ನು ಅಧೀನದಲ್ಲಿ ಯಜಮಾನನು ಇಟ್ಟುಕೊಳ್ಳಲು ಸಾಧ್ಯವಾದದ್ದು- ವರುಣನಿಂದಲೇ.

ಅದಿತಿಪುತ್ರ ವರುಣನಿಂದ ದೂರವಾದ ವ್ಯಕ್ತಿ ಒಂದು ನಿಮಿಷವೂ ಸ್ವತಂತ್ರನಾಗಿರುವುದು ಸಾಧ್ಯವಿಲ್ಲ. ಭಯಶಾಲಿ ಯಜಮಾನನಿಗೆ ಸ್ವಪ್ನದಲ್ಲಿ ಪಿತೃಗಳು ಬಂಧುಗಳೂ ಭಯವಿವರಿಸಿರುವುದರಿಂದ, ಚೋರರು, ತೋಳ ಯಾತನೆಗಳ ಭಯವಾಗುವುದಿಲ್ಲ.

ವರುಣನಲ್ಲಿರುವ ಸ್ಥಿರಧಾರಣಾ ಶಕ್ತಿಗೆ, ನಮಸ್ಕಾರ ಪೂಜೆ ಶ್ರೇಷ್ಠ ಸ್ತುತಿಗಳನ್ನು ಪುತ್ರರೊಂದಿಗೆ ಸೇರಿ ಯಜಮಾನನು ಮುಂದುವರಿಸಿ ಅರ್ಪಿಸುತ್ತಾನೆ.

ವರುಣನ ಕೃಪೆಯಿಂದ ಯಜಮಾನನಿಗಾಗಿ ಉದಕತುಂಬಿದ ನದಿ ಹರಿಯುವಂತಾಗಲಿ. ಯಜ್ಞಾಗ್ನಿ ಇರುವ ಜಾಗದಲ್ಲಿ ಸುಖಜೀವನ ಮಾಡುವಂತಾಗಲಿ. ನಿಯಮದಿಂದ ಶೇಖರಿಸಿದ ಧನ ಶೂನ್ಯವಾಗದಿರಲಿ.

ಕರ್ತವ್ಯಲೋಪ ಯಜ್ಞದಲ್ಲಿ ಪಾಪಿಯನ್ನು ಹಿಂಸಿಸುವ ಆಯುಧದಿಂದ, ಯಜಮಾನನನ್ನು ಹಿಂಸಿಸುವುದು ಬೇಡ. ಅನುಷ್ಠಾನ ಲೋಪಮಾಡಿದವರ ಪಾಪನಾಶವಾಗಲಿ ವರುಣನು ಅಪರಾಧ ಕ್ಷಮಿಸಲಿ.

ಶ್ರೇಷ್ಠನಾಗಿ ಧ್ಯಾನಿಸುವ ಯಜಮಾನನು ವರುಣನ ಸಖ್ಯ ಬೆಳೆಸಬಯಸುತ್ತಾನೆ. ವರುಣನ ಕೃಪೆಯಿಂದ ಯಜಮಾನನ ಕರ್ಮ ಸಮಾಪ್ತಿಗೆ ಮುಂಚೆ, ಅವನ ಶರೀರ ವಿಕಲವಾಗದಿರಲಿ. ಅನುಕೂಲಸ್ಥ ಧನವಂತ ದಾನಿಯಮುಂದೆ ಪುತ್ರರು, ಸಮೀಪ ಬಂಧುಗಳೊಂದಿಗೆ ಧನಯಾಚನೆ ಮಾಡದಂತಾಗಲಿ. ಋಣಬಾಧೆ ಅಂಧಕಾರದಲ್ಲಿರುವವನನ್ನು ಋಣಮುಕ್ತಮಾಡಲಿ. ಯಜಮಾನನ ಹಾಗೂ ಅವನ ಪಿತೃಗಳ ಋಣ ತೀರಲಿ. ಇತರರ ಸಂಪಾದನೆಯಿಂದ ಜೀವಿಸುವಂತಾಗದಿರಲಿ.

ವರುಣನು ಯಜಮಾನನಿಗೆ ಜೀವನದ ಉಷಃಕಾಲದಲ್ಲಿರುವಂತೆ ಮಾಡಲಿ. ಅವನ ಪಾಪಿಷ್ಠ ಹಿಂಸಕಶತ್ರುಗಳು, ದೂರವಾಗಿ ನಾಶವಾಗಲಿ. ಯಜಮಾನನು ಧನ ಶೋಭನಾತ್ಮಕ ಕೀರ್ತಿ ಸುಖಜೀವನ ಪಡೆವಂತಾಗಲಿ.

**ಸೂಕ್ತ - 29 (ಧೃತವ್ರತಾ ಆದಿತ್ಯಾ ಇಷಿರಾ ಆರೇ.....**

ಕೂರ್ಮೋ ಗಾರ್ತ್ಸಮದೋ ಗೃತ್ಸಮದ ಋಷಿಗಳು ವಿಶ್ವೇದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುವರು.

ದೇವತೆಗಳು ಉತ್ತಮ ಬಲದವರು, ಯಜ್ಞಾರ್ಹರು, ಪೂಜ್ಯರು, ಧನದಾತಬಂಧುಗಳು. ಸನಾತನ ಸಮರ್ಪಕ ಕರ್ಮದಿಂದ ದೇವತೆಗಳನ್ನು ಪೂಜೆಮಾಡಬೇಕಾದ ಬಗ್ಗೆ ಯಜಮಾನನು ಚಿಂತಿಸುತ್ತಾನೆ. ಪುತ್ರರೊಂದಿಗೆ ಶ್ರೇಷ್ಠಸ್ತುತಿ ಪಠಿಸುತ್ತಾನೆ. ದ್ವೇಷಿರಾಕ್ಷಸ, ಶತ್ರುಗಳನ್ನು ಹಿಂಸಿಸಿ ಸೋಲಿಸಿ, ಅಪತ್ಕಾರಕರಿಂದ, ತಸ್ಕರರಿಂದ ಭೀತಿನಿವಾರಿಸಿ, ರಕ್ಷಣೆಯನ್ನು ದೇವತೆಗಳು ಒದಗಿಸಲೆಂದು ಭೀತಯಜಮಾನ ಅಪೇಕ್ಷಿಸುತ್ತಾನೆ.

ಯಜಮಾನನು ಮಿತ್ರಾ, ವರುಣ, ವಿಶ್ವೇದೇವತೆಗಳ ಸ್ವರೂಪ ತಿಳಿದವ. ಅದಿತಿ ಇಂದ್ರ ಮರುತ್ತುಗಳು ನಾಶರಹಿತ ಕಲ್ಯಾಣ ಮತ್ತು ಸುಖಕಾರಕರು; ಶೀಘ್ರರಥದಲ್ಲಿ ಯಜಮಾನನ ಯಜ್ಞಾಭಿಮುಖ ಶೀಘ್ರ ಬರಲಿ.

ಪ್ರಾರ್ಥಿತ ದೃಢವ್ರತಿ ಆದಿತ್ಯನು, ಯಜಮಾನರ ಪಾಪಗಳನ್ನು ಅಗೋಚರವಾಗುವಂತೆ ದೂರ ಎಸೆಯಲಿ. ಅಭಿಮಾನಿತಂದೆಯಂತೆ ಯಜಮಾನನ ತಪ್ಪುಗಳನ್ನು ತಿದ್ದಿ, ಅಧಿಕ

[illegible] ಧನ [illegible]. ಇಂದೂ ಮತ್ತು ಮುಂದೆಯೂ ತಮ್ಮನ್ನು ಸುಖವಾಗಿಟ್ಟಿರಲಿ –ಎಂದು ಯಜಮಾನನು ವಿಶ್ವೇದೇವತೆಗಳಲ್ಲಿ ಪ್ರಾರ್ಥಿಸುತ್ತಾನೆ.

**ಸೂಕ್ತ - 30 (ಋತಂ ದೇವಾಯ ಕೃಣ್ವತೇ.....**

ಋಷಿಗೃತ್ಸಮದರು ಇಂದ್ರ ಸೋಮ ಸರಸ್ವತೀ ಬೃಹಸ್ಪತೀ ಮರುದ್ದೇವತೆಗಳನ್ನು ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವ್ಯವಹಾರಗಳಿಗೆ ಚೈತನ್ಯದಾಯಕನಾದ ಭಕ್ತ, ಯಜಮಾನನ ಸಂಬಂಧಿ ಇಂದ್ರನು, ಸ್ತೋತ್ರಗಳಿಂದ ಸ್ತುತಿಸಲ್ಪಡುವವ. ಇಷ್ಟಾರ್ಥಪೂರೈಸಲು ಅಪೇಕ್ಷಿತ ಆಚರಿತ ಪೂಜೆ ತಿಳಿದ ವೃಷ್ಟಿರೂಪ ಉದಕನಿರ್ಮಾಪಕ.

ಶ್ರಮಕೊಡದೇ, ಆಲಸಿಯಾಗಿಸದೇ ಇರುವ ಇಂದ್ರನ ಶಕ್ತಿ ಸರ್ವಗೋಚರ. ಉದಕಗಳು ವಿಶ್ರಾಂತಿಹೊಂದದೆ ತಮ್ಮ ಮಾರ್ಗಗಳನ್ನು ಹುಡುಕಿಕೊಂಡು ಪ್ರವಹಿಸಿ ಸಮುದ್ರ ಸೇರುತ್ತವೆ. ಶಕ್ತ ಶೌರ್ಯಕಾರ್ಯಗಳನ್ನು ಇಂದ್ರನು ಭಟರೊಡನೆ ಆಚರಿಸುತ್ತಾನೆ. 'ಪೂಶ್ಯಮ' ಮತ್ತು ಅವನ ಪುತ್ರರನ್ನು ಅವರ ಗೋವುಗಳನ್ನು ಇಂದ್ರನು ರಕ್ಷಿಸಿದ.

ಅದಿತಿಯಿಂದ ಅಸುರಸ್ಥಾನ ತಿಳಿದ ಇಂದ್ರನು, ಮೇಘದಲ್ಲಿ ಅಂತರಿಕ್ಷ ಏರುತ್ತಾ ತನ್ನ ಮೇಲೆ ಬೀಳುತ್ತಿದ್ದ ವೃತ್ರನನ್ನು ವಜ್ರಾಯುಧದಿಂದ ಕೊಂದನು. 'ಷಂಡವಂಶ' ಪ್ರಧಾನನಾದ ಗರ್ವಿಅಸುರನನ್ನು ಕೊಂದನು. ಗರ್ವದಿಂದ ಕೊಬ್ಬಿದ ಶತ್ರುಗಳನ್ನು ನಾಶಮಾಡಿದನು.

ಇಂದ್ರನು, ಸೋಮ ಹಿಂಡುವವರನ್ನು ಕಾಪಾಡಿ, ಸಂಪದಭಿವೃದ್ಧಿಕೊಡಲಿ. ಅವರಲ್ಲಿ ಗೋವು ಸೇರಿಸಲಿ. ಭಯದ ಯುದ್ಧದಲ್ಲಿ ಭಯರಹಿತ ಸ್ಥಾನ, ಉತ್ತೇಜನ, ರಕ್ಷಣೆಗಳನ್ನು ವಿಧೇಯ ಯಜಮಾನನಿಗೆ ಕೊಡಲಿ.

ಇಂದ್ರಶಕ್ತಿಯನ್ನು ಯಜಮಾನನು ಸ್ತುತಿಸಿಪೂಜಿಸುತ್ತಾನೆ. ಯಾರಿಗೂ ಸೋಮಹಿಂಡದಿರಲು ತಿಳಿಸುವುದಿಲ್ಲ. ಸೋಮ ಇಂದ್ರದೇವತೆಗಳು, ಯಜ್ಞ ವಿಘ್ನಕಾರಿಗಳನ್ನು ನಿರ್ಮೂಲ ಮಾಡಲಿ.

ಬೃಹಸ್ಪತಿಯು ಕೇಡುಬಯಸುವವನನ್ನು, ಗುಪ್ತಸ್ಥಾನದಲ್ಲಿ ಕಾಯುವ ಹಿಂಸಕನನ್ನು, ಅಸುರರನ್ನು, ದ್ರೋಹಿ ಶತ್ರುಗಳನ್ನೂ, ಹುಡುಕಿ ಹೊಡೆದು ಅವರನ್ನು ಜಯಿಸಲಿ.

ಸರಸ್ವತಿ ಮರುದ್ದೇವತೆಗಳು, ಶತ್ರುಮರ್ದನ ಮಾಡಿ ಸ್ತೋತೃಗಳನ್ನು ರಕ್ಷಿಸಲಿ.

ಮರುದ್ದೇವತೆಗಳ ಪೂಜೆಯಿಂದ ಯಜಮಾನನಿಗೆ ಪುತ್ರರು ಪ್ರಖ್ಯಾತಧನ ಉಂಟಾಗಲಿ.

**ಸೂಕ್ತ - 31 (ಅಸ್ಮಾಕಂ ಮಿತ್ರಾವರುಣಾವತಂ.....**

ಋಷಿಗೃತ್ಸಮದರು ವಿಶ್ವೇದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಯಜಮಾನನು ದೇಶಾಂತರ ಸಂಚರಿಸುವಾಗ ಅವರ ರಥಕ್ಕೆ ರಕ್ಷಣೆಗಾಗಿ ವಿಶ್ವೇದೇವತೆಗಳನ್ನು ಪ್ರಾರ್ಥಿಸುತ್ತಾನೆ.

ಅದಿತಿ, ರುದ್ರ, ವಸು –ಇವರುಗಳು ಸಮಾನ ಪ್ರೀತಿಯ ದೇವತೆಗಳು. ಪೂಳಿಪ್ಪಿಸಿ ನಾನಾಲೋಕದಿಂದ ಓಡುವ ರಥವನ್ನು, ಪ್ರಜೆಗಳ ನಡುವೆ ಸುಖವಾಗಿ ಸಂಚರಿಸುವಂತೆ,ರಕ್ಷಿಸಲಿ.

ಇಂದ್ರನು ಶ್ರೇಷ್ಠಕರ್ಮಿ. ಸರ್ವಶಕ್ತ. ಮಹತ್ತಾದ ಬಲದವ. ದ್ಯುಲೋಕದಿಂದ ಹಿಂಸಾರಹಿತ ರಕ್ಷಣೆಯೊಡನೆ ಬಂದು, ಅನ್ನ ಧನ ಸಂಪತ್ತಿಗಾಗಿ ಹೊರಟಿರುವ ಯಜಮಾನನ ರಥದಲ್ಲಿ ಕುಳಿತುಕೊಳ್ಳಲಿ.

ತ್ವಷ್ಟದೇವನು ಪ್ರಸಿದ್ಧ ದಾನಿ, ಸಕಲ ಭೂತ ಸೇವ್ಯ, ದೇವಪತ್ನಿಯರೊಡನೆ ಸಮಾನ ಪ್ರೀತಿಯವ, ಭಗನು ಬೃಹತ್‌ಕಾಂತಿಯುಳ, ಪೂಷನು ವಿಶೇಷ ಪ್ರಜ್ಞೆಯವ, ಅಶ್ವಿನೀದೇವತೆಗಳು ಸೂರ್ಯಾದೇವಿಯ ಭಕ್ತರು –ಇವರುಗಳು ಇಳಾ ಹಾಗೂ ದ್ಯಾವಾಪೃಥ್ವಿಗಳೊಡನೆ ಯಜಮಾನನ ರಥಪ್ರೇರಿಸಲಿ.

ಅಹೋರಾತ್ರಿಗಳು ಪ್ರಸಿದ್ಧ ಧನದವರು. ಪರಸ್ಪರ ನೋಡಿಕೊಳ್ಳುವವರು. ಚೈತನ್ಯದಾಯಕ ರಥ ಪ್ರೇರಿಸಲಿ.

ಅಹಿರ್ಬುಧ್ನ್ಯ, ಅಜಏಕಪಾದ, ತ್ರಿತ, ಋಭುಕ್ಷ, ಸವಿತೃ, ಅಪಾನಪಾದ ಅಗ್ನಿ ಇವರೆಲ್ಲರೂ ಯಜಮಾನನ ಆದರದ, ಅಪೇಕ್ಷಿತ ಸ್ತುತಿ ಸ್ವೀಕರಿಸಲಿ.

ಸೋಮ, ಓಷಧಿ, ಪಶು, ತ್ರಿವಿಧ ಹವಿಸ್ಸುಗಳಿಂದ ವ್ರೀಹ್ಯಾದಿ ಅನ್ನ ಆಜ್ಯ ಉಪಸ್ತರಣಗಳಿಂದ ನೂತನ ಸ್ತುತಿವಾಕ್ಯಗಳಿಂದ ದ್ಯಾವಾಪೃಥ್ವಿಗಳನ್ನು ಯಜಮಾನನು ಸ್ತುತಿಸುತ್ತಾನೆ.

ಅನ್ನಾರ್ಥ ಬಲಾರ್ಥ ಅರ್ಜಿತವಾದ ಸ್ತುತಿಗಳ ಆರಾಧನೆಯ ಈ ದೇವಸಮೂಹವನ್ನು ಯಜಮಾನನ ಕರ್ಮಾಭಿಮುಖ ಬಂದು ಸೇರಲಿ. ಯಜಮಾನನಿಗೆ ಅನ್ನ ಒದಗಿಸಿ ಅವರ ಕರ್ಮದಿಂದ ತೃಪ್ತರಾಗಲಿ.

## ಸೂಕ್ತ - 32 (ಅಸ್ಯ ಮೇ ದ್ಯಾವಾಪೃಥಿವೀ.....

ಋಷಿಗೃತ್ಸಮದರು ದ್ಯಾವಾಪೃಥ್ವಿ ಇಂದ್ರ ತ್ವಷ್ಟ ರಾಕಾ ಸಿನೀವಾಲೀ ಲಿಂಗೋಕ್ತ ದೇವತೆಗಳನ್ನು ಜಗತೀ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದ್ಯಾವಾಪೃಥ್ವಿಗಳು ಎಲ್ಲರಿಂದಲೂ ಸ್ತುತಿತರು ಉತ್ಕೃಷ್ಟ ಅನ್ನವಂತರು. ಯಜಮಾನನು ಧನಕ್ಕಾಗಿ ಯಜ್ಞಮಾಡಲಿಚ್ಛಿಸುವ, ಸೇವಿಸಲಿಚ್ಛಿಸುವ ಸ್ತುತಿಕರ್ತರ ರಕ್ಷಣೆಗಾಗಿ ದ್ಯಾವಾಪೃಥ್ವಿಗಳನ್ನು ಸೇವಿಸುತ್ತಾನೆ.

ಇಂದ್ರನು ಪಾದಗಳಿಂದಲೇ ವ್ಯಾಪಿಸುವ ವೇಗಶಾಲಿ. ಯಜಮಾನನಿಗೆ ಇಂದ್ರನೊಡನೆ ಸ್ನೇಹ ವೃದ್ಧಿಸಲಿ. ಕ್ರೋಧವಿಲ್ಲದ ಮನಸ್ಸಿಂದ, ಲಕ್ಷಣವಾದ ಧೇನು ಕೊಡಲಿ. ಹಗಲು ರಾತ್ರಿಗಳಲ್ಲಿ ಗುಪ್ತಹಿಂಸಕ ಮಾಯೆಗಳಾಗಲಿ, ಶತ್ರುಮಾನವರಾಗಲಿ ಹಿಂಸಿಸದಿರಲಿ. ಇಂದ್ರಸ್ನೇಹ ಛೇದವಾಗುವುದು ಬೇಡ – ಎಂದು ಪ್ರಾರ್ಥನೆ.

ರಾಕಾದೇವತೆ ಉತ್ತಮ ಧನಿ, ಶ್ರೇಷ್ಠ ಆಹ್ವಾನ ಅರ್ಹಳು. ಪುತ್ರೋತ್ಪನ್ನ ಸೂಚಿ, ಶ್ರೇಷ್ಠರೂಪಿಣಿ. ಶೋಭನಾತ್ಮಕ ಬುದ್ಧಿಯುವಳು ಪರಾಕ್ರಮ, ಬಹುಧನ, ಬುದ್ಧಿ ಪ್ರಶಸ್ತ

ಬಾಹು ಉಳ್ಳವಳು. ಹವಿಸ್ಸನ್ನು ಸೇವಿಸಿ ಯಜಮಾನನಿಗೆ ಪುತ್ರಾದಿಗಳನ್ನು ಕೊಡಲಿ.

ಕುಹೂಸಿನೀವಾಲಿ, ರಾಖಾ, ಸರಸ್ವತಿ ಎಂದೆಲ್ಲಾ ಪ್ರಸಿದ್ಧಳಾದ ದೇವಿಯನ್ನು ಆಹ್ವಾನಿಸುತ್ತಾ, ಇಂದ್ರಾಣಿಯನ್ನು ರಕ್ಷಣೆಗಾಗಿಯೂ, ವರುಣಾನಿಯನ್ನು ಕಲ್ಯಾಣಕ್ಕಾಗಿಯೂ ಯಜಮಾನರು ಆಹ್ವಾನಿಸುತ್ತಾರೆ.

**ಸೂಕ್ತ - 33 (ಆ ತೇ ಪಿತರ್ಮರುತಾಂ ಸುಮ್ನಮೇತು.....**

ಋಷಿ ಗೃತ್ಸಮದರು ರುದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ರುದ್ರದೇವನು ಇಷ್ಟಾರ್ಥಪ್ರದ, ಜಗದ್ಧಾರಕ, ಲೋಕರಕ್ಷಕ ನಿತ್ಯತರುಣ. ಸಜ್ಜನಪಾಲಕ. ಪ್ರಕಾಶಮಾನ, ಸ್ತುತ್ಯಾರ್ಹ, ಪೂಜಾರ್ಹ, ಸರ್ವಜ್ಞಸ್ತುತಿತ. ತೇಜಸ್ವಿಪೂಜ್ಯ. ರಥಾರೋಹಿ ಧನದಾತೃ. ಲೋಕಧಾರಿ, ವೈದ್ಯ ಶ್ರೇಷ್ಠ. ಕಾಮರೂಪಿ, ನಾನಾರೂಪಿ, ಬಭ್ರುವರ್ಣ. ಮಲಹಾರಕ, ಪಾಪನಾಶಕ, ಶತ್ರುನಾಶಕ.

ಬಲಶಾಲಿಗಳಲ್ಲೇ ಬಲಶಾಲಿಯಾದ ರುದ್ರನು ವಜ್ರವನ್ನೇ ಆಯುಧವಾಗಿ ಉಳ್ಳವ. ಸಕಲಜಗತ್ತಿಗೂ ಉತ್ಕೃಷ್ಟ ಐಶ್ವರ್ಯವಂತ. ದೃಢತೇಜಸ್ವಿ ಅವಯವಿ ಧನುರ್ಬಾಣಧಾರಿ. ನಾನಾರೂಪಾತ್ಮಕ ಹಾರಧಾರಿ. ಸಿಂಹದಂತೆ ಭಯಂಕರ ಪ್ರಕಟಿತ ಶಕ್ತಿಯುವ.

ಹಿರಣ್ಮಯ ಪ್ರಕಾಶದಿಂದ ಬೆಳಗುವ ಶಕ್ತಿಯಿಂದ ವಿಶ್ವಶಕ್ತಿ ಬೇರಾಗುವುದೇ ಇಲ್ಲ. ರುದ್ರನಿಗಿಂತ ಶಕ್ತನಾದವನು, ರುದ್ರನಿಗಿಂತ ಬೇರೆ ಯಾರೂ ಇಲ್ಲ.

ರುದ್ರನು ತನ್ನ ರೋಗನಾಶಕ ಕ್ಷಮಿಸುವ ಹಸ್ತದಿಂದ, ಅಪರಾಧಿ ಯಜಮಾನನನ್ನು, ಕ್ಷಿಪ್ರವಾಗಿ ಕ್ಷಮಿಸುತ್ತಾನೆ. ಪಾಪದ ಸಕಲಹೊರೆಗಳಿಂದ ರಕ್ಷಿಸುತ್ತಾನೆ, ಪಾಪದ ಕೊನೆಯನ್ನು ಸುರಕ್ಷಿತವಾಗಿ ದಾಟಿಸುತ್ತಾನೆ.

ಪೂರ್ವಕಾಲದಲ್ಲಿ ಮನುವು ರುದ್ರ ಸಂಬಂಧಿ ಶುದ್ಧ ಸುಖಕರ ಓಷಧಿಗಳನ್ನು, ಭಯರಾಹಿತ್ಯ ರೋಗನಾಶಕರ ಓಷಧಿಗಳನ್ನು, ಪಡೆದಂತೆ ಯಜಮಾನನೂ ಪಡೆಯಲು ಅಪೇಕ್ಷಿಸುತ್ತಾನೆ.

ಯಜಮಾನನು, ಚರುಪುರೋಡಾಶ ಆಹ್ವಾನಗಳಿಂದ, ರುದ್ರನನ್ನು ಸಮಾಧಾನ ಚಿತ್ತನನ್ನಾಗಿ ಮಾಡುತ್ತಾನೆ. ಉತ್ತಮೋತ್ತಮ ಸ್ತುತಿ ಸ್ತೋತ್ರ ಅರ್ಪಿಸುತ್ತಾನೆ. 'ಆಯುಷ್ಮಾನ್‌ಭವ' ಎಂದು ಹರಸುವ ತಂದೆಗೆ, ನಮಸ್ಕರಿಸುವ ಪುತ್ರನಂತೆ, ರುದ್ರನಿಗೆ ಯಜಮಾನನು ನಮಸ್ಕರಿಸುತ್ತಾನೆ.

ವಿಸದೃಷ ದೇವತೆಗಳೊಂದಿಗೆ ರುದ್ರನನ್ನು ಪೂಜಿಸುವುದು, ಪೂಜೆಯಲ್ಲಿನ ನ್ಯೂನತೆ, ಅಮಂಗಳಸ್ತುತಿ, ಇವುಗಳು ರುದ್ರನಿಗೆ ಕೋಪ ಉಂಟುಮಾಡದಿರಲಿ.

ರುದ್ರನ ದುಃಖಕಾರಕ ಕ್ರೋಧ ಬುದ್ಧಿ, ಅವನ ಆಯುಧ ಧನಸ್ಸುಗಳು, ಬೇರೆಡೆ ತಿರುಗಲಿ. ಕ್ರೋಧಿಸದೆ, ಕೋಪಿಸದೆ, ಹಿಂಸಿಸದೆ, ಯಜಮಾನನ ಯಜ್ಞಆಹ್ವಾನ ಕೇಳಲಿ. ವೀರಪುತ್ರರೊಂದಿಗೆ ಪ್ರೌಢಸ್ತುತಿ ಕೇಳಲಿ. ಮರುತ್ತುಗಳೊಡಗೂಡಿ ರುದ್ರನು ಓಷಧಿ ಕೊಡಲಿ.

ರುದ್ರದತ್ತ ವನಸ್ಪತಿ ಓಷಧಿಗಳಿಂದ ಶರೀರವ್ಯಾಪಿ ನಾನಾರೋಗಗಳು, ಶತ್ರುಗಳು, ಪಾಪಗಳು, ನಾಶವಾಗಿ ಶತಸಂವತ್ಸರ ಜೀವನ ಅನುಭವಿಸುವಂತಾಗಲಿ. ಸಮರ್ಥವೀರ್ಯವಂತ ಪುತ್ರರು ಪೌತ್ರರು ಸಂಯುಕ್ತರಾಗುವಂತಾಗಲಿ. ಯಜಮಾನನಿಗೆ ಬೇಕಾದ ಸುಖ, ಪುತ್ರಪೌತ್ರರಿಗೆ ಸುಖ, ಉಂಟಾಗಲಿ.

ದೈನ್ಯಯಾಚಕ ಯಜಮಾನನನ್ನು ಅನ್ನದಿಂದ ತೃಪ್ತಿಗೊಳಿಸಿ, ಪೂರ್ಣ ಸುಖಿಯುಕ್ತನಾಗಿ ಮಾಡಲಿ. ಸೂರ್ಯದರ್ಶನದಿಂದ ದೂರಮಾಡದೆ, ಕತ್ತಲಲ್ಲಿ ಇರುವಂತೆ ಮಾಡದೆ, ಯಜಮಾನನಿಗಿಂತ ಬೇರೆ ಶತ್ರುವನ್ನು ಸೋಲಿಸಿ ನಾಶಮಾಡಿ, ಯಜಮಾನನಿಗೆ ಸುಖತರಲೆಂದು ಯಜಮಾನನು ರುದ್ರನಲ್ಲಿ ಪ್ರಾರ್ಥಿಸುತ್ತಾನೆ.

## ಸೂಕ್ತ - 34 (ಧಾರಾವಾರಾ ಮರುತೋ.....

ಋಷಿಗೃತ್ಸಮದರು ಮರುದ್ದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಮರುದ್ದೇವತೆಗಳು ಕಟಕಾದಿ ಸುವರ್ಣ ಆಭರಣಯುಕ್ತರಾಗಿ, ಸುವರ್ಣ ಶಿರಸ್ತ್ರಾಣಗಳಿಂದ ಅಗ್ನಿಯಂತೆ ಬೆಳಗುವರು. ಭಯಂಕರ ರೂಪಿಗಳಾಗಿ ಸ್ಥಿರವೃಕ್ಷಗಳನ್ನು, ಚಲಿಸುವಂತೆ ಮಾಡುವರು.

ಅಲಂಕೃತ ವಕ್ಷಸ್ಸುಳ್ಳ ಶ್ರೇಷ್ಠ ದಾನಿಗಳಾದ ರುದ್ರಪುತ್ರ ಮರುತ್ತುಗಳು ಆತ್ಮಶಕ್ತಿಯಿಂದ ಜಗತ್ತನ್ನು ಪೋಷಿಸಲು ನಾಶರಹಿತ ಮೇಘದಲ್ಲಿ ನುಗ್ಗಿ ಸಂಚರಿಸಿ ವಿದ್ಯುತ್ತನ್ನು, ಸಕಲಲೋಕ ಆಯಾಸಪರಿಹಾರಕ ವೃಷ್ಟಿ ಉದಕವನ್ನೂ ಸುರಿಸುವರು.

ಸಮಾನ ಮನಸ್ಕರಾದ ಮರುತ್ತುಗಳು, ಬಿಂದುರೂಪ ಅಶ್ವ ಮೇಘರೂಪ ರಥದಲ್ಲಿ, ಇಂದ್ರ ಸಮಾನ ಮನಸ್ಸಿಂದ ಹವಿರರ್ಪಿಸುವವರಿಗೆ, ನಾಶರಹಿತ ಉದಕ ಹಾಗೂ ಧನ ಕೊಡುತ್ತಾರೆ.

ಪ್ರಶ್ನಿಸಹಿತರಾಗಿ ಆಗಮಿಸುವಾಗಲೇ ಗೋಚರಿಸುವ ಮರುತ್ತುಗಳು ದಹಿಸುವ ಶಸ್ತ್ರಾಯುಧ ಧರಿಸಿದ್ದಾರೆ. ಶತ್ರುತ್ವ ಬೆಳೆಸುವಂತಹ, ಕ್ರೂರ ತೋಳದಂತಹ, ಅಸುರ ಶತ್ರುಗಳಿಂದ ಯಜಮಾನರನ್ನು ರಕ್ಷಿಸುವ ಮರುತ್ತರು, ತ್ರಿತ ಋಷಿಯ ಹಿಂಸಕರನ್ನು ನಾಶಮಾಡಿದಂತೆಯೇ, ಶತ್ರು ಹಾಗೂ ಶತ್ರು ಆಯುಧನಾಶಮಾಡುವರು.

ಅಂಗೀರಾ ರೂಪದಲ್ಲಿ ಆದಿತ್ಯನಿಗಿಂತಲೂ ಮುಂಚೆಯೇ ಯಜ್ಞನಿರ್ವಹಿಸುತ್ತಾ, ಸೂರ್ಯಾತ್ಮಕ ತೇಜಸ್ಸಿಂದ ಕೃಷ್ಣರಾತ್ರಿ ನಾಶಮಾಡಿ ಉಷಃ ಅವಿರ್ಭಾವಕಾಲದಲ್ಲಿ ಯಜಮಾನನನ್ನು ಪ್ರೇರಿಸುತ್ತಾರೆ.

ಪ್ರಾಣಅಪಾನಾದಿ ಪಂಚ ಸಂಖ್ಯಾತ ಮರುತ್ತುಗಳು, ಮಾನವರಿಂದ ಸ್ತುತಿ, ಸೋಮ ಅಪೇಕ್ಷಿಸುತ್ತಾರೆ. ಹವಿರೂಪಅನ್ನಕ್ಕಾಗಿ, ಅನ್ನಯುಕ್ತರಾಗಿ, ಯಜಮಾನನಲ್ಲಿಗೆ ಬರಲಿ –ಎಂದು ಸ್ತುತಿ ಪ್ರಾರ್ಥನೆ ನಮಸ್ಕಾರಗಳಿಂದ ಯಜಮಾನನು ಯಜ್ಞಾಭಿಮುಖಬರುವ ಮರುತ್ತುಗಳಿಗೆ ಚಮಸ ಪಾತ್ರೆಯ ಸೋಮ ತೋರಿ, ಆಹ್ವಾನಿಸುತ್ತಾನೆ.

ಮೋಘಿಂಪುತ್ತಾರೆ.

ಇಷ್ಟಾರ್ಥ ಪೂರ್ತಿಕೆಗಾಗಿ, ಮರುತ್ತುಗಳನ್ನು ಹಿಡಿದಿಟ್ಟು ಕೊಂಡಿದ್ದ 'ತ್ರಿತ'ನಿಗೆ ಕೊಟ್ಟಂತೆ, ಯಜಮಾನನಿಗೂ ಗೋ, ಧನ ರಕ್ಷಣೆ ಕೊಡಲೆಂದು ಯಜಮಾನನು ಯಾಚನೆ, ಪ್ರಾರ್ಥನೆ ಮಾಡುತ್ತಾನೆ.

ಮರುತ್ತುಗಳು ಭಕ್ತಆರಾಧಕನ ಪಾಪ ದಾಟಿಸಲಿ. ಶತ್ರುಗಳಿಂದ ಬಿಡಿಸಲಿ, ಯಜಮಾನಾಭಿಮುಖ ಪ್ರಸರಿಸಲಿ. ಉದಕವೃಷ್ಟಿಯಿಂದ ಅಶ್ವಪುಷ್ಟಿಗೊಳಿಸಿ, ಸ್ತುತಿಸುವ ಹೋತೃವಿಗೆ ಅನ್ನ ಅನ್ನವಂತ ಪುತ್ರ, ಸಂಗ್ರಾಮದಲ್ಲಿ ಯುದ್ಧ ಕುಶಲತೆ, ಶಕ್ತಿ, ಶತ್ರುಗಳಿಂದ ಅಹಿಂಸೆ ಇವುಗಳನ್ನು, ಮರುತ್ತುಗಳಲ್ಲಿ ಯಜಮಾನನು ಪ್ರಾರ್ಥಿಸುತ್ತಾನೆ.

**ಸೂಕ್ತ - 35 (ಉಪೇಮಸೃಕ್ಷಿ ವಾಜಯುರ್ವಚಸ್ಯಾಂ.....**

ಋಷಿಗೃತ್ಸಮದರು ಅಪಾಂನಪಾತ್ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಪಾಂನಪಾತ್ ಅಗ್ನಿಯು ಉದಕಗಳ ಮೊಮ್ಮಗ. ಸಮಸ್ತ ಭೂತ ಜಾತಗಳನ್ನೂ ಸೃಷ್ಟಿಸುವವ. ದೇವತೆಗಳ ಆಪ್ತ ಸಖಿ. ಮನೋಹರಶರೀರದವ ಅತ್ಯುತ್ಕೃಷ್ಟ ಅಂತರಿಕ್ಷರೂಪಿ. ಸಮಸ್ತ ದಿನಗಳಲ್ಲೂ ಪ್ರಕಾಶಿತ, ನಾಶರಹಿತ ತೇಜಸ್ವಿ.

ಉದಕಮಧ್ಯ ಮೇಘಗಳಲ್ಲಿ ಅಂತರಿಕ್ಷಸ್ಥನಾಗಿ, ವೃಷ್ಟಿಕಾರಕನಾಗಿ, ನದೀ ಪ್ರವಹಿಸುವಂತೆ ಮಾಡುತ್ತಾನೆ. ವೃಷ್ಟಿಉದಕವು, ಭೂಮಿಯ ಮೇಲಿನ ಉದಕದೊಡನೆ ಸೇರಿ, ಸತತವಾಗಿ ನದಿಯಾಗಿ ಹರಿದು, ಬಡವಾನಿಲ ತೃಪ್ತಿಗೊಳಿಸಿ ಅಪಾಂನಪಾತ್ ಅಗ್ನಿಯನ್ನು ಸುತ್ತುವರಿದು ಉಪಚರಿಸುತ್ತದೆ.

ಸೋಮವು ಬ್ರಹ್ಮ ಉತ್ಪನ್ನವಾದುದು. ಉದಕಸಾರ ಭೂತವಾದುದು. ಅಗ್ನಿಯಪಾನಕ್ಕೆ ಇರುವುದು. ಇಳಾ ಸರಸ್ವತಿ ಭಾರತಿಯರಿಂದ ಅಪಾಂನಪಾತ್ ಅಗ್ನಿಪಾನಕ್ಕಾಗಿ ಪ್ರವಹಿಸುತ್ತದೆ.

ಅಪಾಂನಪಾತ್ ಅಗ್ನಿಯು ಆಜ್ಯದಿಂದ ಶುದ್ಧಗೊಂಡು, ಇಂಧನರಹಿತವಾಗಿ, ಉದಕದಿಂದ ಸುತ್ತುವರಿದು, ತೇಜಸ್ಸಿಂದ ಪ್ರಕಾಶಿಸುತ್ತಾನೆ.

ಉಚ್ಚೈ ಶ್ರವಸ್ ಮತ್ತು ಜಂಗಮಾತ್ಮಕಗಳು ಅಗ್ನಿಯಲ್ಲೇ ಉತ್ಪನ್ನವಾದವುಗಳು. ವಿಸ್ತೃತ ಪ್ರಕಾಶಿ. ಈ ಶಾಖೆಯ ಅಗ್ನಿಯಿಂದಲೇ ಫಲಪುಷ್ಪಗಳು ಉತ್ಪನ್ನವಾದವು.

ಮಾಧ್ಯಮಿಕಾಪಾತ್ ಅಗ್ನಿಯು, ಅಪಾಂನಪಾತ್ ಅಗ್ನಿ ಸಂಬಂಧಿ. ಧೇನುರೂಪದಲ್ಲಿ ಕರೆಯುವ ಮೇಘಸ್ಥಮಧ್ಯ ಪ್ರಕಾಶಿ. ಶ್ರೇಷ್ಠ ಅನ್ನ ಭಕ್ಷಿಸಿ ಪೂಜಕ ಭಕ್ತನಿಗಾಗಿ ಧನ ಮತ್ತು ಉತ್ತಮ ಶಕ್ತಿಕೊಡುತ್ತಾನೆ.

ಮೇಘಗಳಲ್ಲಿ, ಸೇಚನದಿಂದ ತನ್ನನ್ನು ತಾನೇ ಸೃಷ್ಟಿಸಿಕೊಂಡು, ತಾನೇ ಮೇಘಗಳಲ್ಲಿ ಶೀಘ್ರವಾಗಿ ಜನಿಸಿ, ಮೇಘಸ್ಥ ಉದಕಪಾನ ಮಾಡುತ್ತಾ, ಕ್ಷಯಿಸದೆ, ವೃಷ್ಟಿಯಲ್ಲಿ ಪಾರ್ಥಿವಾಗ್ನಿ ರೂಪದಲ್ಲಿ, ಕಾಷ್ಟ ಶರೀರದಲ್ಲಿ ವ್ಯಾಪ್ತನಾಗುವನು.

ಅಸತ್ಯಾತ್ಮರೂ, ಸಮೀಪಿಸಲಾರರು.

ಅಪಾಂನಪಾತ್ ಅಗ್ನಿಯು ಅಂತಃಕರಣಪೂರ್ವಕವಾಗಿ ಶ್ರೇಷ್ಠ ಸ್ತುತಿಮಂತ್ರಗಳನ್ನು ಅರಿಯಲಿ –ಎಂದು ಪೂಜಿಸುವ ಸ್ತುತಿಕರ್ತನು, ಕಲ್ಯಾಣಾತ್ಮಕ ಸಂತಾನಕ್ಕಾಗಿ, ಅನ್ನಕ್ಕಾಗಿ ಅಪಾಂನಪಾತ್ ಅಗ್ನಿಯನ್ನು ಸ್ತುತಿಸುತ್ತಾನೆ.

**ಸೂಕ್ತ - 36 (ತುಭ್ಯಂ ಹಿನ್ವಾನೋ ವಸಿಷ್ಟ.....**

ಋಷಿ ಗೃತ್ಸಮದರು ಇಂದ್ರ, ಮಧು, ಮರುತ, ಮಾಧವ, ತ್ವಷ್ಟಾ, ಶುಕ್ರ, ಅಗ್ನಿ, ಶುಚಿ, ನಭ, ಮಿತ್ರಾವರುಣ ದೇವತೆಗಳನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಸಕಲಜಗತ್‌ಪ್ರಭು, ಹೋತೃವಿನ ಪುರಾತನ ಮಂತ್ರ, ಋತ್ವಿಕರ ಸೋಮರೂಪ ಅನ್ನ, ಕ್ಷೀರ ಮತ್ತು ಉದಕ ಮಿಶ್ರಿತ ಸೋಮಪಾನ ಸಂತೋಷಕ್ಕೆ ಇತರ ದೇವತೆಗಳೊಡನೆ ಆಗಮಿಸಲಿ.

ರುದ್ರಪುತ್ರ ಮರುತ್ತುಗಳು ತಮ್ಮ ವೃಷದ್ವತಿ ಕುದುರೆಗಳ ರಥದಲ್ಲಿ ಆಗಮಿಸಲಿ.

ತ್ವಷ್ಟಪ್ರಭೃತಿಗಳು ದೇವಪತ್ನಿಯರೊಡನೆ ಶ್ರೇಷ್ಠಗಣ ಮಾಡಿಕೊಂಡಿರುವವರು. ಯಜ್ಞದಲ್ಲಿ ಬರ್ಹಿಯ ಮೇಲೆ ಕುಳಿತು ಕ್ರೀಡಿಸಲಿ. ಸೋಮದಿಂದ ತೃಪ್ತರಾಗಲಿ.

ಅಗ್ನಿಯು ಇಂದ್ರಾದಿಗಳನ್ನು ಯಜ್ಞಕ್ಕೆ ಕರೆತಂದು ಗಾರ್ಹಪತ್ಯಾದಿ ಮೂರು ಸ್ಥಾನಗಳಲ್ಲಿ ಆಸೀನನಾಗಲಿ. ತನ್ನ ಭಾಗದ ಹವಿಸ್ಸು ಸೇವಿಸಲಿ.

ಧನವಂತ ಇಂದ್ರನಿಗೆ ಸೋಮವು ಶಕ್ತಿಯನ್ನೂ ಬಾಹುಶಕ್ತಿಯನ್ನೂ, ಇದಕ್ಕೆ ಮೂಲವಾದ ಅಂತಃಶಕ್ತಿಯನ್ನೂ ವೃದ್ಧಿಸುತ್ತದೆ.

ಮಿತ್ರಾವರುಣರೂ ಆಹ್ವಾನ ಸ್ವೀಕರಿಸಿ ಯಜ್ಞಕ್ಕೆ ಬರಲಿ. ಎಲ್ಲಾ ದೇವತೆಗಳೂ ಸೋಮಪಾನದಿಂದ ತೃಪ್ತರಾಗಲಿ.

## (ಅಷ್ಟಕ - 2, ಅಧ್ಯಾಯ - 8)

**ಸೂಕ್ತ - 37 (ಮಂದಸ್ವ ಹೋತ್ರಾದನು.....**

ಗೃತ್ಸಮದ ಋಷಿಗಳು ದ್ರವಿಣೋದಾ ಅಶ್ವಿನೀ ಅಗ್ನಿ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದ್ರವಿಣೋದ ದೇವನು ವನಸ್ಪತಿ ದೇವನೇ. ಆಹ್ವಾನ ಯೋಗ್ಯ, ಇಷ್ಟಾರ್ಥಪ್ರದ ಹೋತೃವಾದ ದ್ರವಿಣೋದನನ್ನು ಈ ಹಿಂದೆ ಸೋಮಯಾಗದಲ್ಲಿ ಆಹ್ವಾನಿಸಿದ್ದಂತೆ ಈ

ಅಗ್ನಿಯು ಅನೇಕ ಕರ್ಮಸಹಾಯಕಳಾದ ಭೂಮಿಯನ್ನು, ಅನುಕೂಲಳಾಗಿರುವಂತೆ ಮಾಡಲಿ. ಯಜ್ಞಕ್ಕೆ ದೇವತೆಗಳನ್ನು ಕರೆತರಲಿ. ಯಜಮಾನನನ್ನು ರಕ್ಷಿಸಲಿ. ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನು ಅನುಗ್ರಹಿಸಲಿ.

**ಸೂಕ್ತ - 6 (ಪ್ರ ಕಾರವೋ ಮನನಾ ವಚ್ಯಮಾನಾ.....**

ವಿಶ್ವಾಮಿತ್ರ ಋಷಿ ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಪೂಜಿಸುತ್ತಾರೆ.

ಆಹವನೀಯ ಪ್ರಭೇದದ ಅಗ್ನಿಯು ಸಪ್ತಜಿಹ್ವೆಯುಳ್ಳ, ಯಜ್ಞಕರ್ತರಿಂದ ಇಚ್ಛಿತ, ಉತ್ಪನ್ನನಾದೊಡನೆಯೇ ದ್ಯಾವಾಪೃಥಿವಿ ಮತ್ತು ಅಂತರಿಕ್ಷವ್ಯಾಪಿ ಆಗಿದ್ದಾನೆ. ಅಚಲಸ್ಥಿತನಾದ ಅಗ್ನಿಯು ಅರಣ್ಯ ಹಾಗೂ ಓಷಧಿಗಳನ್ನು ದಹಿಸುವಾಗ ಸೂರ್ಯನಿಗಿಂತಲೂ, ಪ್ರಕಾಶಮಯ-ನಾಗಿರುತ್ತಾನೆ.

ದ್ಯಾವಾಪೃಥಿವಿಗಳು ಯಜ್ಞದಲ್ಲಿ ಅನುಕೂಲಾತ್ಮರು, ಸ್ತುತಿಬೆಳೆಸುವವರು, ಸಂವೃದ್ಧರು, ಮನುಉತ್ಪನ್ನ ಪ್ರಜೆಗಳು, ಹವಿರ್ಯುಕ್ತ ದೇವಾಸಕ್ತರು, ಯಜ್ಞಾರ್ಹ ದೇವತೆಗಳು ಹಾಗೂ ಅಂತರಿಕ್ಷ ಪುತ್ರಿ ಯಜ್ಞದಲ್ಲಿ ತೃಪ್ತಿ ಪಡೆಯುತ್ತಾರೆ.

ದೈವಭಕ್ತಿಯ ಯಜ್ಞಕರ್ತರು, ಹವಿಸ್ಸು, ಅನ್ನ, ಘೃತ ತುಂಬಿದ ಸ್ರುಕ್‌ಪಾತ್ರೆಯನ್ನು, ಅಗ್ನಿ ಹಾಗೂ ಇತರ ದೇವತೆಗಳ ಪೂಜೆಗಾಗಿ, ಪೂರ್ವಾಭಿಮುಖವಹಿಸುತ್ತಾರೆ.

ಅಗ್ನಿತೇಜಸ್ಸನ್ನು ಸ್ತುತಿಸಿದಾಗ ಅಗ್ನಿ ರಥದ ಮುಂಭಾಗದಲ್ಲಿ ಅಶ್ವಯೋಜಿತವಾಗುತ್ತದೆ. ಉತ್ತಮ ಆಹ್ವಾನದ, ಆದಿತ್ಯಪ್ರಕಾಶದ, ಮುನ್ನೂರಮೂರು ದೇವತೆಗಳು ಅವರ ಪತ್ನಿಯರು, ಉಪಸಂಜ್ಞಕ ಪಿತೃಗಳು, ಎಲ್ಲರೊಡನೆ ಒಂದೇ ಅಥವಾ ಅನೇಕ ರಥಗಳಲ್ಲಿ, ತನ್ನ ಹಾಗೂ ಆ ದೇವತೆಗಳೆಲ್ಲರ ಸೋಮಪಾನ ತೃಪ್ತಿಗಾಗಿ, ಯಜ್ಞಕ್ಕೆ ಬರಲಿ.

ಇಳಾ ಹೆಸರಿನ ಗೋರೂಪಿ ಭೂಮಿಯು, ಅನೇಕ ಕರ್ಮ ಸಹಾಯಕಳು, ಪಶುದಾತಳು. ಯಾಗಾಚರಣೆಗೆ ಅನುಕೂಲ ಕಲ್ಪಿಸುವವಳು. ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನು, ಶುದ್ಧ ಬುದ್ಧಿಯಿಂದ ಸಫಲಗೊಳಿಸಲಿ.

**ಸೂಕ್ತ - 7 (ಪ್ರ ಯ ಆರುಃ ಶಿತಿಪೃಷ್ಠಸ್ಯ ಧಾಸೇರಾ.....**

ಋಷಿ ವಿಶ್ವಾಮಿತ್ರರು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ತ್ವಷ್ಟಪುತ್ರ ಅಗ್ನಿಯು, ಅಸಂಖ್ಯಾತ ಜ್ವಾಲೆಯುಳ್ಳ, ದೇವತೆಗಳನ್ನು ಯಜ್ಞಕ್ಕೆ ಕರೆವ ಪರಾಕ್ರಮಿ, ವೃಷ್ಟಿಯಮೂಲಕ ಉದಕ ಕರೆಯುತ್ತಾನೆ. ಉದಕವಾಹಕ ನದಿಗಳನ್ನು ಆಶ್ರಯಿಸಿದ್ದಾನೆ. ಅಂತರಿಕ್ಷದಲ್ಲಿ ವಾಸಿಸಲು ಇಚ್ಛಿಸುವ ಅಗ್ನಿ, ರೋಹಿತವರ್ಣದ ಜ್ವಾಲೆಗಳನ್ನು ವಾಹನದಂತೆ ಹೊಂದಿದ್ದಾನೆ.

ವಡವನಾಮಕ ಅಗ್ನಿಯ ಅಶ್ವಗಳು, ಅವಿಶ್ರಾಂತಗಮನಕ್ಕೆ ಬೇಕಾದಪುಷ್ಟಿಗಳಿಸಲು,

ದ್ಯಾವಾಪೃಥಿವಿಗಳನ್ನು ಅಗ್ನಿಯರಶ್ಮಿಗಳು ಹಾಗೂ ಪೂಜ್ಯ ನದಿಗಳು ನಾನಾರೀತಿ ವ್ಯಾಪಿಸಿವೆ. ಅಗ್ನಿಗೆ ದೀರ್ಘಾಯುಸ್ಸು, ಯಜಮಾನನಿಗೆ ಅನ್ನ, ಯಾಗಗಳ ಹೆಚ್ಚಳ, ಇವುಗಳಿಗಾಗಿ ದ್ಯಾವಾಪೃಥಿವಿಗಳು ಸಹಕರಿಸುತ್ತವೆ. ಸ್ತುತಿತನಾದಾಗ ಅಗ್ನಿ ಸಂತೋಷಗೊಳ್ಳುತ್ತಾನೆ.

ಅಗ್ನಿಯ ಆಶ್ರಯಜನ್ಯಸುಖ ತಿಳಿದ ಜನ ಅಗ್ನಿಯ ಶಾಸನಕ್ಕೆ ಒಳಗಾಗುತ್ತಾರೆ. ತೇಜಸ್ವಿಗಳಾಗಿ ಸ್ವರ್ಗ ಪಡೆಯುತ್ತಾರೆ. ಅಧ್ವರ್ಯುವರ್ಗದ ಐದು, ಹೋತೃವರ್ಗದ ಏಳು ಜನ ಋತ್ವಿಕರು ಅಗ್ನಿಯ ಆಹವನೀಯ ಸ್ಥಾನ ರಕ್ಷಿಸುತ್ತಾರೆ. ಸೋಮಸೇಚನ ಮಾಡಿ ಅಗ್ನಿಯನ್ನು ಸಂತೋಷಿಸುತ್ತಾರೆ. ನಂತರ ಇತರ ದೇವತೆಗಳಬಗ್ಗೆ ಕ್ರಮ ಕೈಗೊಳ್ಳುತ್ತಾರೆ.

ಅಗ್ನಿಯು ದ್ಯಾವಾಪೃಥ್ವಿಗಳನ್ನು ವೈದಿಕಕರ್ಮಕ್ಕೆ ಕರೆಯಲಿ. ಭೂದೇವಿಯು ಯಜ್ಞಕ್ಕಾಗಿ ಗವಾದಿಪಶು ಇತ್ಯಾದಿಗಳನ್ನು ಅನುಕೂಲ ಮಾಡಿಕೊಡಲಿ. ಉಷಸ್ಸು ಧನದಾಯಕಳಾಗಲಿ, ಸ್ತೋತೃಗಳಿಗೆ ಪುತ್ರಪೌತ್ರಾದಿಗಳನ್ನು ಒದಗಿಸಿ, ಯಜಮಾನನ ಪಾಪವನ್ನು ಅಗ್ನಿಜ್ವಾಲೆಗಳು ನಾಶಮಾಡಲಿ.

**ಸೂಕ್ತ - 8 (ಅಂಜಂತಿ ತ್ವಾ ಮಧ್ವರೇ ದೇವಯಂತೋ.....**

ವಿಶ್ವಾಮಿತ್ರ ಋಷಿಗಳು ಯೂಪ, ವಿಶ್ವೇದೇವಾಃ, ಛಿನ್ನಯೂಪ ಮೂಲ ಭೂತಸ್ಥಾಣುಗಳನ್ನು ತ್ರಿಷ್ಟುಪ್ ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಶ್ರೇಷ್ಠ ವನಸ್ಪತಿಯಿಂದ ಕಂಟಕರಹಿತವಾಗಿ, ಛೇದಿತವಾಗಿ, ಸಾವಯವವಾಗಿ ಸರಿಯಾದ ಅಳತೆಗೆ ಕತ್ತರಿಸಲ್ಪಟ್ಟು ಸಮಗ್ರವಾಗಿ ಯೂಪವು ಸಿದ್ಧವಾಗಿದೆ. ಪ್ರಾಕ್ಷಾಲನಗಳಿಂದ ಪವಿತ್ರಗೊಂಡು, ಘೃತಾಂಜನಗಳಿಂದ ಲೇಪಿತವಾಗಿ, ವಸ್ತ್ರಾಲಂಕಾರಗೊಂಡು, ಯೂಪವು ಋತ್ವಿಕ್ ಶ್ರದ್ಧಾಳುಗಳಿಂದ ಸ್ತುತಿತವಾಗಿದೆ. ಅಧ್ವರ್ಯುವಿಂದ ಉತ್ಕೃಷ್ಟಜಾಗದಲ್ಲಿ ಮೇಲೆತ್ತಿನಿಲ್ಲಿಸಲ್ಪಟ್ಟು ಪವಿತ್ರವಾಗಿ ತೇಜಸ್ಸಿನಿಂದ ಶೋಭಿಸುತ್ತದೆ.

ಯಜ್ಞದಲ್ಲಿ ಮುಂಚೆಯೇ ಆಹವನೀಯಾಗ್ನಿಗೆ ಪುರೋಭಾಗದಲ್ಲಿ ಭೂಮಿಯ ಮೇಲೇಸ್ಥಾಪಿತ ವಸ್ತ್ರಾಲಂಕೃತ ಯೂಪವು, ಅಂತರಿಕ್ಷವನ್ನು ನೋಡುತ್ತದೆ.

ಅಧ್ವರ್ಯುವು, ದೇವತೆಗಳು ಯಜ್ಞಕ್ಕೆ ಬರಲು ಅಪೇಕ್ಷಿಸುತ್ತಾನೆ. ದ್ವಾದಶಾದಿತ್ಯರು ಅಷ್ಟವಸುಗಳು, ದ್ಯಾವಾಪೃಥಿವಿಗಳು, ಅಂತರಿಕ್ಷದೇವತೆಗಳು, ಧ್ವಜಪ್ರಾಯ ಯೂಪಸ್ತಂಭವನ್ನು ಎತ್ತಿಹಿಡಿಯಲಿ.

ಯೂಪವು ಭೂಮಿಯ ಮೇಲೆ ನಿಂತಿರುವಾಗ, ಸೌಭಾಗ್ಯಪ್ರದ ಯೂಪಸ್ಥಾಣುವು ನೂರಾರು ಶಾಖೆಗಳುಳ್ಳದ್ದಾಗಿದ್ದು, ಯಜಮಾನನ ಪುತ್ರಪೌತ್ರಾದಿಗಳು ಸಹಸ್ರ ಶಾಖೆಯಲ್ಲಿ ಅಭಿವೃದ್ಧಿಹೊಂದಲಿ. ಯಜಮಾನನಿಗೆ ಧನ, ಅನ್ನ, ಸಂಪತ್ತು ಒದಗಿಸಲಿ. ಸಂಗ್ರಾಮದಲ್ಲಿ ಯಜಮಾನರನ್ನು ರಕ್ಷಿಸಿ, ಶತ್ರುಗಳನ್ನು ದೂರದಲ್ಲೇ ಹಿಂಸಿಸಿ ಯಜಮಾನಾರ್ಪಿತ ಹವಿಸ್ಸನ್ನು ದೇವತೆಗಳಿಗೆ ಸೇರಿಸಲಿ.

**ಸೂಕ್ತ - 9 (ಸಖಾಯಸ್ತ್ವಾ ವವೃಮಹೇ ದೇವಂ.....**

ಋಷಿ ವಿಶ್ವಾಮಿತ್ರರು ಅಗ್ನಿದೇವನನ್ನು ಬೃಹತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಉಪದ್ರವರಹಿತ, ಒಳ್ಳೆಯದಾನಿ, ಪಾಪಾಪೇಕ್ಷಿ ಅಗ್ನಿಯು ಸ್ವೇಚ್ಛೆಯಿಂದ ಉದಕದಲ್ಲಿ ಅದೃಶ್ಯನಾಗಿದ್ದು ಅರಣಿಗಳ ಮಧ್ಯೆ ಕಾಣಿಸಿಕೊಳ್ಳುತ್ತಾನೆ. ದೇವತೆಗಳನ್ನು ಯಜ್ಞಕ್ಕೆ ಕರೆತರುವ ಅಗ್ನಿಯನ್ನು ಶೀಘ್ರವಾಗಿ ವಾಯುವು ಯಜ್ಞಕ್ಕೆ ಕರೆತಂದಿದ್ದಾನೆ.

ಅಗ್ನಿಯು ಯಜ್ಞವನ್ನು ಸರ್ವವಿಧದಲ್ಲೂ ರಕ್ಷಿಸುವವನು, ಉಪಕಾರಿ ಚಿರಂತನ ದೇವತೆಗಳು ಹವಿರ್ವಹನಕ್ಕಾಗಿ, ಉದಕದಲ್ಲಿನ ಅಗ್ನಿ ಸಮೀಪಕ್ಕೆ ಬಂದು ಅಗ್ನಿಯನ್ನು ಸ್ವೀಕರಿಸಿದ್ದಾರೆ.

ಋತ್ವಿಗ್ಯಜಮಾನರು, ರಕ್ಷಣಾರ್ಥ ಅಗ್ನಿಯನ್ನು ಆಹ್ವಾನಿಸುತ್ತಾರೆ. ಹದಿನಾರು ಜನ ಋತ್ವಿಜರಲ್ಲಿ ಹನ್ನೆರಡು ಜನ ಹೋಮ ಮಾಡುತ್ತಾರೆ. ಉಳಿದ ನಾಲ್ವರು ಉದ್ಗಾತೃಗಳು; ಯಾಗದ ಸುತ್ತಲೂ ಆಸೀನರಾಗುತ್ತಾರೆ. ಅಗ್ನಿಯು ಸಂತುಷ್ಟ ಮನಸ್ಸಿನಿಂದ ಹೋತೃವನ್ನು ಸಂತುಷ್ಟಿಗೊಳಿಸಿ, ಮೂರು ಸಾವಿರದ ಮುನ್ನೂರ ಮೂವತ್ತೊಂಬತ್ತು ದೇವತೆಗಳಿಂದ ಘೃತಸೇಚನಗೊಂಡು ಹೋತೃವಾಗಿ ದೇವತೆಗಳಿಂದ ಪೂಜಿತನಾಗುತ್ತಾನೆ. ಋತ್ವಿಜರೂ ಪೂಜಿಸಲಿ.

ರಾತ್ರ್ಯಾರಂಭದಲ್ಲಿ ಉದ್ದೀಪ್ತ ಅಗ್ನಿಯನ್ನು ಉಪಾಸಿಸಿ ಆಹುತಿಗಳಿಂದ ತೃಪ್ತಿಗೊಳಿಸಲಿ. ಅಗ್ನಿಹೋತ್ರಾದಿ ಶುಭಕಾರ್ಯಗಳಿಂದ ಪಶುಪುತ್ರಾದಿ ಫಲಪ್ರದವಾಗುತ್ತದೆ.

**ಸೂಕ್ತ - 10 (ತ್ವಾಮಗ್ನೇ ಮನೀಷಿಣಃ.....**

ಋಷಿ ವಿಶ್ವಾಮಿತ್ರರು ಅಗ್ನಿದೇವನನ್ನು ಉಷ್ಣಿಕ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಮಸ್ತ ಪದಾರ್ಥಗಳ ವಿಷಯಜ್ಞಾನ ಉಳ್ಳವ. ಸಮಸ್ತ ಪ್ರಜೆಗಳಿಗೆ ಅಧಿಪತಿ, ಸ್ತೋತ್ರಜನ ಸ್ತುತ್ಯ.

ಯಜ್ಞಗೃಹವೇ ಅಗ್ನಿಯ ಸ್ವಗೃಹ, ಸಪ್ತಹೋತೃಗಳಿಂದ ಆಜ್ಯಾಹುತಿಸ್ವೀಕರಿಸಿ ಯಾಗರಕ್ಷಕನಾಗಿದ್ದು, ಅಗ್ನಿಷ್ಟೋಮ ಯಾಗದಲ್ಲಿ ಹೋತೃವಾಗಿರುತ್ತಾನೆ.

ಯಾಷ್ಟವ್ಯದೇವತೆಗಳು, ದೇವತೆಗಳನ್ನು ಯಜ್ಞಕ್ಕೆ ಕರೆತರುವರು. ಋತ್ವಿಜರ ತೇಜಸ್ಸಿಗೆಕಾರಣರಾದ ದೇವತೆಗಳನ್ನು ಅಗ್ನಿಯು ಯಜ್ಞಕ್ಕೆ ಆಹ್ವಾನಿಸುತ್ತಾನೆ.

ಅಧ್ವರ್ಯುಗಳು ಅಗ್ನಿಯನ್ನು ಸೋಮ, ಆಜ್ಯ, ಆಹುತಿಗಳಿಂದ ಉದ್ದೀಪನ ಗೊಳಿಸುತ್ತಾರೆ. ಅಗ್ನಿಯು ಇತರ ದೇವತೆಗಳೊಂದಿಗೆ ಯಜ್ಞಕ್ಕೆ ಬರಲಿ. ಅಗ್ನಿಯ ಗುಣ ಹೋತ್ರಾದಿಗಳ ಕ್ಷೇಮಕ್ಕಾಗಿ ಪ್ರಕಾಶಗೊಳ್ಳಲಿ. ಹೆಚ್ಚು ಸ್ತುತಿ ಅಭಿವೃದ್ಧಿಹೊಂದಿ ವಿಶಿಷ್ಟಪ್ರಕಾಶದಿಂದ ಯಜಮಾನನ ಸಮೀಪ ಇದ್ದು ಪಾಪ ಪರಿಹರಿಸಿ ಶುದ್ಧಿಗೊಳಿಸಲಿ.

ಯಜಮಾನನಿಗೆ ವೀರಪುತ್ರರು ಪಶುಸಮೃದ್ಧಿ ಹೆಚ್ಚು ದಾನಭೋಗಾದಿ ಧಾನ್ಯ, ಧನ, ಸಂತೋಷಕೊಡಲಿ, ಶತ್ರುಗಳನ್ನು ಅತಿಕ್ರಮಿಸಲಿ.

## ಸೂಕ್ತ - 11 (ಅಗ್ನಿರ್ಹೋತಾ ಪುರೋಹಿತೋ......

ಋಷಿ ವಿಶ್ವಾಮಿತ್ರರು ಅಗ್ನಿದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಯಜ್ಞವಿಷಯದಲ್ಲಿ ವಿಶೇಷ ಜ್ಞಾನಿ, ಗ್ರಹಣಸಾಮರ್ಥ್ಯದಿಂದ ಎಲ್ಲವನ್ನೂ ತಿಳಿಯಬಲ್ಲ. ಅಗ್ನಿಷ್ಟೋಮಾದಿ ಯಜ್ಞಕರ್ಮ ತಿಳಿದವ, ದೇವತೆಗಳನ್ನು ಯಜ್ಞಕ್ಕೆ ಕರೆತರುವವ. ಹವಿರ್ವಾಹಕನಾಗಿ ಪ್ರತಿಷ್ಠಿತರುವವ. ಹವಿಸ್ವೀಕಾರಕ್ಕೆ ಸ್ಥಾಪಿತ, ಬಹುವಿಧ ಅನ್ನೋಪೇತ ಅಗ್ನಿಯು ಉತ್ಪನ್ನವಾದ ಸಕಲ ವಸ್ತುಗಳ ಜ್ಞಾನವುಳ್ಳವ.

ಯಜಮಾನ ಪೂಜಿತ ಸಕಲ ದೇವತೆಗಳೂ ಅಗ್ನಿಯಲ್ಲೇ ಸುಸಂಗತರು. ಮನುವಂಶದ ಸನ್ಮಾರ್ಗ ಪ್ರವರ್ತಕ, ಅಗ್ನಿಯ ಅನುಗ್ರಹದಿಂದ ಯುದ್ಧದಲ್ಲಿ, ಶ್ರೇಷ್ಠ ಧನ ದಾನ ಉಂಟಾಗುತ್ತದೆ. ಸಮಸ್ತ ಶತ್ರುಸೇನೆಯನ್ನು, ಸ್ವಸಾಮರ್ಥ್ಯದಿಂದ, ತಿರಸ್ಕರಿಸುವ, ಅಗ್ನಿಯ ತೇಜಸ್ಸು ತಮೋ-ಪರಿಹಾರಕವಾಗಿರುತ್ತದೆ.

ಅಗ್ನಿಯು ಯಜಮಾನನಿಗೆ ತತ್ತ್ವಜ್ಞಾನ ವಿಷಯದಾತನಾಗಲಿ. ಬಹುಧನ, ಅನ್ನ ಗೃಹ ಧಾನ್ಯಾದಿವಸ್ತು ಅನುಗ್ರಹಿಸಲಿ.

## ಸೂಕ್ತ -12 (ಇಂದ್ರಾಗ್ನೀ ಆ ಗತಂ ಸುತಂ ಗೀರ್ಭಿರ್ನಭೋ.....

ಋಷಿ ವಿಶ್ವಾಮಿತ್ರರು ಇಂದ್ರಾಗ್ನಿದೇವತೆಗಳನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರಾಗ್ನಿಗಳು ದೇವಲೋಕ ಪ್ರಕಾಶದಾಯಕರು, ಶತ್ರುಗಳಿಗೆ ಬಾಧೆ ಉಂಟುಮಾಡುವವರು, ಸಮಾನ ಜಯಶಾಲಿಗಳು, ಪಾಪಪರಿಹಾರಕರು, ಜಯಿಸಲು ಅಶಕ್ಯರು, ಯಥೇಚ್ಛಅನ್ನದಾತರು ಸ್ತೋತ್ರರಕ್ಷಕರು.

ಇಂದ್ರಾಗ್ನಿಗಳಲ್ಲಿ ಬಲ, ಅನ್ನ ಹಾಗೂ ವೃಷ್ಟಿಪ್ರೇರಕ ಶಕ್ತಿಗಳು ಒಟ್ಟಿಗೆ ಸೇರಿಕೊಂಡಿವೆ. ಯುದ್ಧಗಳಲ್ಲಿಗಳಿಸುವ ಜಯವು, ಇಂದ್ರಾಗ್ನಿಗಳ ಸಾಮರ್ಥ್ಯವನ್ನು ಪ್ರಸಿದ್ಧಪಡಿಸುತ್ತದೆ. ಇಂದ್ರಾಗ್ನಿಗಳು ತೊಂಬತ್ತೊಂಬತ್ತು ಶತ್ರುಪಟ್ಟಣಗಳನ್ನು, ಏಕಕಾಲದಲ್ಲಿ ಒಂದೇಪ್ರಯತ್ನದಲ್ಲಿ, ನಾಶಪಡಿಸಿದರು.

ಇಂದ್ರಾಗ್ನಿಗಳು ಒಟ್ಟಾಗಿ, ಸ್ವರ್ಗದಿಂದ, ಯಜಮಾನನ ಯಾಗಕ್ಕೆ ಬಂದು, ತೃಪ್ತಿಯಿಂದ ಸೋಮಪಾನ ಮಾಡುವಂತೆ ಯಜಮಾನನ ಆಹ್ವಾನ.

ಸೋಮರಸವು, ಜ್ಯೋತಿಷ್ಟೋಮಾದಿ ಹೋಮಸಾಧಕ, ಯಜ್ಞಸಾಧಕಭೂತ, ಸ್ತೋತೃವಿನ ಸ್ವರ್ಗಫಲಪ್ರಾಪ್ತಿಗೆ ಸಹಾಯಕಾರಿ, ಇಂದ್ರಾಗ್ನಿಗಳಿಗೆ ಉತ್ಸಾಹಕಾರಿ, ಕರ್ಮಫಲಪ್ರಾಪ್ತಿಗಾಗಿ ಕರ್ಮನಿರತ ಹೋತೃಗಳಿಂದ, ಅಭಿಷವಣಾದಿ ಕಾರ್ಯಗಳಿಂದ, ಸುಸಂಸ್ಕೃತವಾಗಿದೆ. ಭಕ್ತಿಸ್ತುತಿಯುಕ್ತವಾಗಿ ಸಿದ್ಧವಾಗಿ ಸಂಸ್ಕಾರಗೊಂಡಿದೆ.

ಶಸ್ತ್ರವೇದವಿದರಾದ ಹೋತೃಗಳೂ, ಸಾಮಗಾನಿ ಉದ್ಗಾತೃ, ಸ್ತುತಿರೂಪ ವಾಕ್ಕಿನಿಂದ ಅನ್ನಪ್ರಾಪ್ತಿಗಾಗಿ ಇಂದ್ರಾಗ್ನಿಗಳನ್ನು ಆಶ್ರಯಿಸುತ್ತಾರೆ.

**ಸೂಕ್ತ -1 (ಸೋಮಸ್ಯ ಮಾ ತವಸಂ.....**

ವಿಶ್ವಮಿತ್ರೋ ಗಾಥಿನಃ ಋಷಿ ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಆಜ್ಯಪ್ರೋಕ್ಷಿತ ಅನುಗ್ರಹಾತ್ಮಕ, ಸೌಭಾಗ್ಯದವ, ದೇವಾಹ್ವಾನಿ, ಸಹಜಬಂಧು, ವೇಗರಶ್ಮಿ, ಪ್ರಕಾಶಮಾನಿ, ಅಪ್ರತಿಹತಸೌಭಾಗ್ಯದವ, ಸಕಲಲೋಕಜನಕ, ಉದಕಗರ್ಭಿ, ಸರ್ವತ್ರಸಂಚಾರಿ, ನಿತ್ಯಪ್ರಕಾಶಮಾನಿ, ಯಜ್ಞಕರ್ಮಸಹಾಯಕ, ಸಮಸ್ತ ಸ್ತುತಿಕರ್ಮತಿಳಿದವ, ಗೋಪಶುದಾಯಕ, ಅರಣಿಯಿಂದ ದರ್ಶನೀಯ.

ಪ್ರತಿಮಾನವರಲ್ಲೂ, ಹೋತೃಗೃಹದಲ್ಲಿಯೇ ಸ್ಥಿತನಾದ ಅಗ್ನಿಯು, ಅನ್ನದಿಂದ ವೃದ್ಧಿಗೊಳ್ಳುತ್ತಾ, ಎಲ್ಲರಿಂದಲೂ ನೋಡಲ್ಪಡುತ್ತಾ, ಎಲ್ಲರಿಂದಲೂ ಅಪೇಕ್ಷಿತನಾಗಿದ್ದಾನೆ.

ವಸ್ತ್ರವಿಲ್ಲದಿದ್ದರೂ ಅನಗ್ನನಾಗಿರುವ ಅಗ್ನಿ, ಜನನೀಜನಕ ದ್ಯಾವಾಪೃಥಿವಿಗಳಿಗೆ ಸುಖತರುವ ತೇಜಸ್ವಿ. ಪುಷ್ಟಿಯಾದ ಓಷದಭಕ್ಷಕ. ಅಂತರಿಕ್ಷವ್ಯಾಪಿ ಅಗ್ನಿಯು ಓಷಧಿ ಮತ್ತು ವೃಷ್ಟಿದಾತ. ವಾಯು ಉದಕಗಳೊಡನೆ ಗುಹೆಯಲ್ಲಿದ್ದರೂ, ಅಗ್ನಿಯು ಯಾರಿಗೂ ಲಭ್ಯನಲ್ಲ. ಸ್ತೋತ್ರದಿಂದ ವೃದ್ಧಿಗೊಂಡು, ಮಧುರ ಉದಕ ಸುರಿಸುತ್ತಾ, ಕರ್ಮನಿಮಿತ್ತ, ದೇವತೆಗಳಿಂದ ತರಲ್ಪಟ್ಟು, ನಾನಾ ರೂಪರಶ್ಮಿಗಳ ಮೂಲಕ, ಉದಕ ಸೇರಿರುವವನಾಗಿದ್ದಾನೆ.

ತನ್ನ ತೇಜಸ್ಸಿನಿಂದಲೇ ಸಪ್ತಸಂಖ್ಯಾಕ ನದಿಗೆ ಕಾರಣವಾದ, ಜಲ ಸೃಷ್ಟಿಸಿ, ಅದರಲ್ಲೇ ಸುಪ್ತನಾಗಿ ಮಲಗಿರುವ ಅಗ್ನಿಯು, ಉತ್ತಮವಾದೊಡನೆಯೇ ದೇವತೆಗಳು ಅಗ್ನಿಯನ್ನು ಸಮೀಪಿಸಿ ಪೂಜಿಸಿದರು. ಗುಹೆಯಲ್ಲೇ ಪ್ರವರ್ಧಮಾನನಾದ ಅಗ್ನಿಯನ್ನು, ಸೂರ್ಯನು ಆಶ್ರಯಿಸುತ್ತಾನೆ.

ಅಗ್ನಿಯು, ಯಜಮಾನನನ್ನು ಶುದ್ಧಿಗೊಳಿಸಿ, ಪ್ರಕಾಶವಾಗಿ ಅನ್ನಸಂಪತ್ತು ಕೊಡುತ್ತಾನೆ. ಯಜಮಾನನ ಸಮಸ್ತ ಹವಿಸ್ಸುಗಳೂ, ಸ್ತುತಿವಾಕ್ಯಗಳಿಂದ ಯಶಸ್ವಿಗೊಳ್ಳುತ್ತವೆ. ದೇವತೆಗಳಿಗೆ ಯಜ್ಞವನ್ನು ನೆನಪಿಸುತ್ತಾ, ಅವರನ್ನು ಹಿಂಬಾಲಿಸುತ್ತಾ, ಅವರ ಹಿತೈಷಿಯಾಗಿದ್ದು ಭಕ್ತರನ್ನು ಸುಖವಾಗಿಡುತ್ತಾನೆ.

ಯಜಮಾನನು ಅಗ್ನಿಯಲ್ಲಿ ಸ್ತುತಿ ಹವಿಸ್ಸುಗಳನ್ನು ಅರ್ಪಿಸಿ, ಪ್ರಾರ್ಥನೆ ಮತ್ತು ಯಾಚನೆಗಳನ್ನು ಸಲ್ಲಿಸುತ್ತಾನೆ.

ಉತ್ತಮ ವೀರ್ಯಯುಕ್ತ ಅನ್ನ, ಪುತ್ರಪೌತ್ರಾದಿ ಅನುಗ್ರಹ, ದೇವಾಪೇಕ್ಷಿತಸ್ತುತಿವೃದ್ಧಿ, ಪ್ರಶಸ್ತ್ಯ ಪೂಜ್ಯ ಕೀರ್ತಿಯುಕ್ತ ಧನ, ಸೋಮ ಹಿಂಡುವಕಾರ್ಯಕ್ಕೆ ಬಲ, ಶತ್ರುಜಯಗಳನ್ನು ಕರುಣಿಸಲಿ.

ಅಗ್ನಿಯು ಇಳಾನಾಯಕ ಭೂಮಿಯನ್ನು ಯಜಮಾನನಿಗೆ ಅನುಕೂಲಮಾಡಲಿ. ದೇವತೆಗಳಲ್ಲಿ ಯಜ್ಞಸ್ಥಾಪಿಸಲಿ. ದ್ಯಾವಾಪೃಥ್ವಿಗಳನ್ನು ರಕ್ಷಣಾಬಲದಿಂದ ಯಜಮಾನನ ಶರೀರವನ್ನು ರಕ್ಷಿಸಿ, ತೊಂದರೆ ನಿವಾರಿಸಲಿ.

ವಿಶ್ವಾಮಿತ್ರ ವಂಶಸ್ಥರಲ್ಲಿ ಪ್ರಜ್ವಲಿತನಾಗಿ, ಅನುಗ್ರಹಾತ್ಮಕ ಬುದ್ಧಿಯವನಾಗಿ ಅನ್ನ ಮಹತ್ವಾದ ಧನ, ಅಶ್ವಾದಿಧನಗಳನ್ನು ಅಗ್ನಿಯು ಕೊಡುವವನಾಗಲಿ. ಯಜಮಾನನು ಕರ್ಮ ಹವಿರರ್ಪಿಸುವಂತಾಗಲಿ.

**ಸೂಕ್ತ - 2 (ವೈಶ್ವಾನರಾಯ ಧಿಷಣಾಮೃತಾವೃಧೇ.....**

ಋಷಿ ವಿಶ್ವಾಮಿತ್ರರು, ಅಗ್ನಿರ್ವೈಶ್ವಾನರ ದೇವತೆಗಳನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ವೈಶ್ವಾನರರೂಪಿ, ಶುದ್ಧಅಕುಟಿಲ, ಉದಾರಮನಸ್ಸಿನವ, ಪಿಂಗಳವರ್ಣ ಜ್ವಾಲೆಯವ. ಯಜ್ಞಪುರೋಹಿತ, ಯಜ್ಞಪೇಕ್ಷಕ, ಯಜ್ಞಾಪೇಕ್ಷಿತ, ಯಜ್ಞಾರ್ಹ, ಯಜ್ಞಾಹ್ವಾನಿ, ಯಜ್ಞಕರ್ತ ಅಗ್ನಿಯು ಜ್ಞಾತಪ್ರಜ್ಞ, ಸ್ತುತ್ಯಾರ್ಹ, ದೈವಹೋತೃ, ದೇವತೆಗಳಿಗೆ ಹವಿರ್ದಾತ.

ಅಗ್ನಿಯನ್ನು ದೇವತೆಗಳು ಮೂರು ರೂಪಗಳಲ್ಲಿ ಪಾರ್ಥಿವಾಗ್ನಿ, ವೈದ್ಯುತಾಗ್ನಿ, ಸೂರ್ಯರೂಪಿ ಎಂದು ಶೋಧಿಸಿದರು. ಮರ್ತ್ಯಲೋಕದಲ್ಲಿ ದೇಹಗಳ ಮೇಲೆ ಪಾರ್ಥಿವಾಗ್ನಿ ಸ್ಥಾಪಿಸಿದರು. ಉಳಿದೆರಡೂ ಅಂತರಿಕ್ಷಾಭಿಮುಖವಾಗಿ ಹೊರಟವು.

ಜ್ಞಾನದೇವತೆಗಳು ಯಜ್ಞದಲ್ಲಿ ಅರಣಿಗರ್ಭದಿಂದ, ಶಕ್ತಿಪೂರ್ವಕವಾಗಿ ಅಗ್ನಿ ಉತ್ಪಾದಿಸಿ, ತೀಕ್ಷ್ಣತೆಗಾಗಿ ಸಂಸ್ಕರಿಸಿದರು. ದೇವತೆಗಳ ಕ್ಷೇಮಕ್ಕೆ ಇರುವ ಅಗ್ನಿಯು ಉತ್ಪನ್ನನಾದ ಒಡನೆಯೇ ತನ್ನ ಪ್ರದೇಶ ಸ್ವರ್ಗಕ್ಕೆ ಏರಿ ಉನ್ನತ ಮತ್ತು ನಿಮ್ನ ಪ್ರದೇಶದಲ್ಲಿ ಸಂಚರಿಸಿ, ತನ್ನ ವೀರ್ಯ ಪ್ರಕಟಿಸುತ್ತಾನೆ.

ಉತ್ಪನ್ನಕಾಲದಿಂದಲೇ ಮಾತಾಪಿತೃ ದ್ಯಾವಾಪೃಥ್ವಿಗಳನ್ನು ಬೆಳಸಿ, ವೈಶ್ವಾನರ, ಗಾರ್ಹಪತ್ಯ, ಅಹವನೀಯ ರೂಪದಲ್ಲಿ, ಯಜ್ಞವರ್ಧಕನಾಗಿದ್ದಾನೆ.

ಮಾತರಿಶ್ವನು, ಪೃಥ್ವಿಯಲ್ಲಿ ಸ್ಥಾಪಿತನಾದ ಅಗ್ನಿಯು, ಭೃಗುಋಷಿ ಹಾಗೂ ಯಜಮಾನನ ಅಭಿಲಾಷೆ ಆಕಾಂಕ್ಷೆಗಳಿಗೆ, ಪಾತ್ರನಾದನು. ಸೂರ್ಯರೂಪದಿಂದ ಸಂಚರಿಸುತ್ತಾ, ಪಶ್ವಾದಿ ಧನದಾತನಾಗಿ, ಸರ್ವವ್ಯಾಪಿಯಾಗಿದ್ದಾನೆ.

ಯಜ್ಞಕರ್ತ ಯಜಮಾನರು ತಮ್ಮ ಕರ್ಮದಿಂದ ಸ್ತುತಿನಿರ್ಮಿಸಿ, ಸಂಸ್ಕರಿಸಿ, ಪರಿಷ್ಕರಿಸಿ, ಪೂಜಿಸಿ ಸ್ತೋತ್ರಮಾಡುತ್ತಾರೆ. ಬರ್ಹಿಸ್ಸನ್ನುಹಾಸಿ, ಸ್ರುಕ್‌ಪಾತ್ರೆ ಹಿಡಿದು ಸ್ತುತಿಸುತ್ತಾರೆ. ಸ್ತೋತ್ರಪೂರ್ವಕ ಯಾಚಿಸುತ್ತಾರೆ. ಕರ್ಮವಂತ ಯಜಮಾನರು ಯಜ್ಞಾರ್ಥ, ಧನಲಾಭಾರ್ಥವಾಗಿ, ಗೃಹಹಿತಕಾರಿ, ಮಾನವಹಿತಕಾರಿ, ಸ್ವರ್ಗಪದಾತೃ, ಅನ್ನವಂತ ಪ್ರಶಂಸಾರ್ಹನಾದ ಅಗ್ನಿಯನ್ನು, ಆಹ್ವಾನಿಸುತ್ತಾರೆ.

ಅಗ್ನಿಯು ಯಜಮಾನನಿಗೆ ಕರ್ಮ ನೆರವೇರಿಸಿ, ಅನ್ನವನ್ನು ಪ್ರೇರಿಸಿ, ಅನ್ನ ಸ್ಥಾಪಿಸಿ,

## ಸೂಕ್ತ - 3 (ವೈಶ್ವಾನರಾಯ ಪೃಥುಪಾಜಸೇ ವಿಪ್ರೋ.....

ಋಷಿವಿಶ್ವಾಮಿತ್ರರು ಅಗ್ನಿರ್ವೈಶ್ವಾನರ ದೇವನನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವೈಶ್ವಾನರರೂಪಿ ಅಗ್ನಿಯು ಹೊಂಬಣ್ಣದವ ಆಹ್ಲಾದಕರ ಶ್ರೇಷ್ಠರಥಿ, ದೇವತೆಗಳನ್ನು ಉಪಚರಿಸುವವ, ಶ್ರೇಷ್ಠಕರ್ಮಗಳಿಂದ ದೇವತೆಗಳಿಗೆ ಪ್ರಿಯ, ದೇವತೆಗಳನ್ನು ಯಜ್ಞಕ್ಕೆ ಕರೆತರುವವ.

ಶಕ್ತಿಯಿಂದ ಉತ್ಪನ್ನನಾದ ಅಗ್ನಿಯನ್ನು, ದೇವತೆಗಳು ಈ ಲೋಕದಲ್ಲಿ ಸ್ಥಾಪಿಸಿದ್ದಾರೆ. ಅಗ್ನಿಯು ದ್ಯಾವಾಪೃಥ್ವಿಗಳನ್ನು ಪೂಜಿಸುತ್ತಾ, ನಾನಾರೂಪದಲ್ಲಿ ಅವರ ಮಧ್ಯೆ ಸಂಚರಿಸುತ್ತಾನೆ.

ಸಕಲರನ್ನೂ, ಸರ್ವತ್ರ ಸ್ವಪ್ರೇರಣೆಯಿಂದ ಪರಿಗ್ರಹಿಸುತ್ತಾ, ಉತ್ಪನ್ನನಾದೊಡನೆಯೇ, ಸಕಲವನ್ನೂ ವ್ಯಾಪಿಸಿ, ಆಹವನೀಯರೂಪದಲ್ಲಿ ಯಜ್ಞಗೃಹದಲ್ಲಿರುತ್ತಾನೆ.

ಸನ್ಮಾರ್ಗಿಗಳಾಗಬೇಕೆಂದೂ ಸುಖಾಪೇಕ್ಷೆಯಿಂದಲೂ ಮೇಧಾವಿ ಋತ್ವಿಜರು, ಅಗ್ನಿಯನ್ನು ಕುರಿತು ರಮಣೀಯ ಸ್ತೋತ್ರಗಳಿಂದ, ಸ್ವಕರ್ಮಗಳಿಂದ, ಸನಾತನ ಯಜ್ಞನಿರ್ವಹಿಸುತ್ತಾರೆ.

ಋತ್ವಿಜರು ಒಂದುಗೂಡಿ ಯಜ್ಞನಿರ್ವಹಿಸಿ, ದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಗೊಳಿಸಲಿ.

ಅನ್ನ, ಅನ್ನಸಾಧಕವಾದ ವೃಷ್ಟಿ ಸಸ್ಯವರ್ಗ, ಸತ್ಪುತ್ರರು ಧೀರ್ಘಾಯುಸ್ಸು ಸಂಪದಭಿವೃದ್ಧಿ ಕೊಡಲು, ಅಗ್ನಿಯಲ್ಲಿ ನಮಸ್ಕಾರ, ಸ್ತುತಿ ಅರ್ಪಿಸುತ್ತಾರೆ.

ಯಜ್ಞಗೃಹವ್ಯಾಪಿ ಅಗ್ನಿಯನ್ನೂ, ಅವನ ತೇಜಸ್ಸನ್ನೂ, ಸ್ತೋತ್ರ ಮಾಡುತ್ತಾ, ಸಂತೋಷ-ಪಡಿಸುವ ಕರ್ಮವನ್ನು ಮಾಡಿ, ಪ್ರಭೂತ ಧನವನ್ನು ಯಜಮಾನರು ಪ್ರಾರ್ಥಿಸುತ್ತಾರೆ.

## ಸೂಕ್ತ - 4 (ಅಪ್ರೀ ಸೂಕ್ತ) (ಸಮಿತ್ಸಮಿತ್ಸುಮನಾ ಬೋಧ್ಯಸ್ಮೇ.....

ವಿಶ್ವಾಮಿತ್ರ ಋಷಿ ಇಧ್ಮಸ್ಸಮಿದ್ಧೋಗ್ನಿ, ತನೂನಪಾತ್, ಇಳ, ಬರ್ಹಿ, ದೇವೀರ್ದ್ವಾರ, ಉಷಾಸಾನಕ್ತ, ದೇವ್ಯೌ ಹೋತಾರೌ ಪ್ರಚೇತಸೌ, ತಿಸ್ರೋ ದೇವ್ಯಃ ಸರಸ್ವತೀ ಇಳಾಭಾರತ್ಯಃ, ತ್ವಷ್ಟಾ, ವನಸ್ಪತಿ, ಸ್ವಾಹಾ ಕೃತಯ -ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಪ್ರಕಾಶಾತ್ಮಕ ದೇವಸಖಿ, ಅನುಗ್ರಹಾತ್ಮಕ, ಬುದ್ಧಿಯುತ ಪ್ರಭುದ್ಧನಾಗಿ ಕಾಂತಿಯಿಂದ ಶೋಭನಾತ್ಮಕ, ಧನದ ವಿಷಯದಲ್ಲಿ ಯಜಮಾನನಿಗೆ ಅನುಗ್ರಹಿಸಲಿ. ಯಜ್ಞಾರ್ಥವಾಗಿ ದೇವತೆಗಳನ್ನು ಉತ್ತಮ ಬುದ್ಧಿಯಿಂದ ಯಜ್ಞಕ್ಕೆ ಕರೆತರಲಿ. ದೇವತೆಗಳನ್ನು ಉದ್ದೇಶಿಸಿ ಯಾಗಮಾಡಲಿ.

ತನೂನಪಾತ್ ಅಗ್ನಿಯನ್ನು, ವರುಣಮಿತ್ರ ಅಗ್ನಿಗಳು ಕಾಲತ್ರಯದಲ್ಲಿ ಪೂಜಿಸುತ್ತಾರೆ. ತನೂನಪಾತ್ ಉದಕಕ್ಕೆ ಕಾರಣಭೂತರಾಗುವಂತೆ ಮಾಡಲಿ.

ದೇವಹೋತೃವಿಗೆ, ಅಭಿಮುಖ ಸುತಿಗಳು, ಹೋಮರೂಪ ಅನ್ನ, ನಮಸ್ಕಾರಗಳು

ಇಂದ್ರ, ವರುಣ, ಮರುತ್ತು, ಮಿತ್ರ ಇವರುಗಳು, ಯಜಮಾನನನ್ನು ಸಂತೋಷಪಡಿಸ
ದ್ಯಾವಾಪೃಥ್ವಿಗಳನ್ನು ಪ್ರೇರಿಸಲಿ.

ಹೋತೃರೂಪ ಅಗ್ನಿ ದೇವತೆಗಳನ್ನು, ಪ್ರಧಾನರು, ಅನ್ನವಂತರು ಆದ ಯಜಮಾನ ಸೋಮ ಅಲಂಕಾರಗಳಿಂದ ಪೂಜಿಸಿ ತೃಪ್ತಿಪಡಿಸುತ್ತಾರೆ. ಪ್ರತಿ ವ್ರತಾಚರಣೆಯಲ್ಲೂ ಆ ಉದಕಯುಕ್ತ ಎಂದು ಪ್ರಕಾಶಿಸುತ್ತಾರೆ.

ಭಾರತಿ, ಇಳಾ, ಸರಸ್ವತಿಯರು, ಆದಿತ್ಯ, ತೇಜಸ್ಸು, ಪೃಥ್ವಿ ಹಾಗೂ ಮಾಧ್ಯಮಿಕಾಲೋಕ ತೇಜಸ್ಸುಗಳೊಡನೆ, ಯಜ್ಞಾಭಿಮುಖಿ ಬಂದು ದರ್ಭಾಸೀನರಾಗಲಿ.

ತ್ವಷ್ಟದೇವತೆಯು ಯಜಮಾನನಿಗೆ, ಸತ್ತ್ವ ಉಳ್ಳಯಾಗಾದಿ ಕರ್ಮ ಕೊಡಲಿ. ಶ್ರೇಷ್ಠಬಲ ಸೋಮಹಿಂಡುವ, ದೇವಭಕ್ತನಾಗಲು, ಪೋಷಕವಾದ, ರೇತಸ್ಸು ಅನುಗ್ರಹಿಸಲಿ.

ವನಸ್ಪತಿಯು, ಅಗ್ನಿಯು ಯಜಮಾನನ ಸಮೀಪ ಇರುವಂತೆಮಾಡಲಿ. ಅಗ್ನಿಯ ಪಶುಸಂಸ್ಕರಿಸತಕ್ಕ ದೇವತೆಗಳ ಜನ್ಮಸ್ವರೂಪ ತಿಳಿದವನು, ದೇವತೆಗಳ ಹೋತೃವಾಗಿ ಪೂಜಿಸ

ಸ್ವಾಹಾಕಾರ ಆಹುತಿಯಿಂದ ದೇವತೆಗಳು ತೃಪ್ತರಾಗಲಿ, ಅಗ್ನಿಯು ಇಂದ್ರ ಹಾಗ ಇತರ ದೇವತೆಗಳೊಡಗೂಡಿ, ರಥದಲ್ಲಿ ಯಜ್ಞಕ್ಕೆ ಬರಲಿ. ಅದಿತಿಯೊಡನೆ ದರ್ಭಾಸೀನರಾಗ

**ಸೂಕ್ತ - 5 (ಪ್ರತ್ಯಗ್ನಿರುಷಸಶ್ಚೇಕಿತಾನೋಬೋದಿವಿಪ್ರಃ .....**

ವಿಶ್ವಾಮಿತ್ರಋಷಿ ಅಗ್ನಿದೇವನನ್ನು ತ್ರಿಷ್ಟುಪ್‌ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಎಲ್ಲರಿಂದ ಅಪೇಕ್ಷಿತ, ಸತ್ಯಸಾಧಿಸುವವ, ಗುಹೆಯಲ್ಲಿ ಅಡಗಿದ್ದ ಯಜ್ಞಕರ್ತನಮಿತ್ರ, ಸ್ತುತಿಸಲ್ಪಡುವವ, ಶಾಂತಜ್ವಾಲೆಯಿಂದ ಕಾಂತಿಯುಕ್ತನಾದವ, ಆದರಿಸು ಸ್ಥಾನ ಆಶ್ರಯಿ, ಮನೋಹರ ಜಲಸೃಷ್ಟಿಕರ್ತ, ಉನ್ನತ ಪ್ರದೇಶದಲ್ಲಿ ಆಶ್ರಯಧಾತ, ಸಮ ಪದಾರ್ಥಗಳನ್ನು ತಿಳಿದವ, ಭಕ್ತರಿಂದ ಪ್ರಜ್ವಲಿತ, ಕತ್ತಲು ಚದುರಿಸುವವ, ಸಕಲ ಸ್ತೋ ಶಸ್ತ್ರಗಳಿಂದ ವೃದ್ಧಿಗೊಳ್ಳುವವ.

ದೇವತೆಗಳು ಮನುಸಂತತಿಯಲ್ಲಿ, ಅಗ್ನಿಯನ್ನು ಸ್ಥಾಪಿಸಿದರು. ಅಗ್ನಿಯು ಆದಿ ಪ್ರಭಾವರಶ್ಮಿ ಅನುಸರಿಸಿ, ಉಷಸ್ಸಿನ ಪ್ರಭಾವ ಆವಿರ್ಭಾವ ತಿಳಿದು, ಪ್ರಜ್ವಲಿತನಾ ಸೂರ್ಯರೂಪದಲ್ಲಿ ಹೋತೃವಾಗಿ, ಅಂತರಿಕ್ಷದಲ್ಲಿ ಸೂರ್ಯರೂಪದಿಂದ ಬೆಳಗುತ್ತಾನೆ.

ಯಜ್ಞ ರಕ್ಷಕ ಅಗ್ನಿಯು, ಮರುದ್ಗಣ, ವರುಣ, ವಾಯು, ನದೀಪರ್ವತ, ಅಧ್ವರ್ಯು ಪ್ರೇರಕ. ದ್ಯಾವಾಪೃಥ್ವಿಗಳನ್ನು ವಿನೂತನ ಮಾಡುತ್ತಾ, ಅವುಗಳ ನಡುವೆ ವೃದ್ಧಿಸುವವನಾಗಿದ್ದಾ

ತೇಜೋಮಂಡಲದ ಮಧ್ಯೆ ತೇಜಸ್ವೀ ಸ್ವರ್ಗ ಎತ್ತಿಹಿಡಿದಿರುವ ಅಗ್ನಿಯು, ವ್ಯಾಪಿಸಿ ಓಷಧಿಗಳು ಉದಕದಿಂದ ಬೆಳೆಯುತ್ತವೆ. ವಾಯುವು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾ

ಸೋಮವನ್ನು, ದ್ರವಿಣೋದಾ ದೇವತೆಗಳು, ಋತುದೇವತೆಗಳು ಊರ್ಜಸಂಜ್ಞಕ ದೇವತೆಗಳು ಸಹ, ಸಂಜ್ಞಕರೊಡನೆ, ಪಾನಮಾಡಿ, ತೃಪ್ತರಾಗಿ, ಯಾಗ ಅನುಮೋದಿಸಲಿ.

ದ್ರವಿಣೋದನು ಹಿಂಸಕನಾಗದೇ, ದೃಢಗಾತ್ರದವನಾಗಲಿ.

ಅಗ್ನಿಯು ಮಹದ್ಗುಣಗಳ ಸಕಲ ದೇವತೆಗಳೂ ಇಚ್ಛಿಸುವನಾಗಿದ್ದಾನೆ. ಸಕಲರಿಗೂ ನಿವಾಸದಾತನಾಗಿದ್ದಾನೆ. ಅಗ್ನಿಯು ಸಮಿತ್ತು ಆಹುತಿ ಸ್ತುತಿಗಳಿಂದ ತೃಪ್ತನಾಗಲಿ, ಮಾನವರಿಗೆ ಹಿತಮಾಡಲಿ.

## ಸೂಕ್ತ - 38 (ಉದು ಷ್ಯ ದೇವಃ ಸವಿತಾ ಸವಾಯ.....

ಋಷಿಗೃತ್ಸಮದರು, ಸವಿತಾ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಸವಿತೃದೇವನು ಪ್ರಕಾಶಮಾನ ಪ್ರಸಿದ್ಧ ಸರ್ವಜ್ಞ, ದ್ಯುಲೋಕೋತ್ಪನ್ನ ಸಂಚಾರಕರ್ಮಿ.

ಜಗತ್ ಸೃಷ್ಟಿಕರ್ಮ ಉಳ್ಳವನಾಗಿ, ಲೋಕತೃಪ್ತಿಗಾಗಿ, ಪ್ರತಿದಿನವೂ ಉದಿಸಿ ಮೇಲೇರುವ ಸವಿತೃವು ದೇವಪತ್ನಿಯರ ಪಾಲಕ, ಧನದಾತ, ಸ್ತೋತ್ರಗಳಿಂದ ಸ್ತುತಿತ. ತನ್ನ ವಿಸ್ತೃತಕಿರಣ ಬಾಹುಗಳನ್ನು ಜಗತ್ತಿನ ಕಲ್ಯಾಣಕ್ಕಾಗಿ ವಿಸ್ತೃತಮಾಡಿ ಸಂಚಾರಿಜನಗಳನ್ನು ಅವರ ಸಂಚಾರ ಕರ್ಮಗಳನ್ನೂ, ನಿಯಂತ್ರಿಸುತ್ತಾನೆ.

ಉದಯದಲ್ಲಿ ಹಾಸಿಗೆಯಿಂದೆದ್ದು ಪ್ರಸವಿತೃ ಸೂರ್ಯನು ಅವಿರ್ಭವಿಸಿ ಕಾಲವಿಭಾಗ ಮಾಡುತ್ತಾನೆ.

ಸೂರ್ಯಾಸ್ತವಾಗಿ, ರಾತ್ರಿ ಅವಿರ್ಭವಿಸಿದಾಗ ಜಯದ ಯುದ್ಧಕ್ಕೆ ಹೊರಟ ಯೋಧ, ಸಕಲ ಪ್ರಾಣಿಗಳೂ, ಕರ್ಮನಿರಥರಾಗಿರುವವರು, ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ, ಕಾರ್ಯ ಶಕ್ತರೂ, ಪ್ರಜ್ಞಾವಂತರಾಗಿದ್ದರೂ, ಸಹ ಮನೆಗೆ ಹಿಂತಿರುಗುತ್ತಾರೆ.

ಸವಿತೃವಿನ ಅಸಾಧಾರಣ ಕರ್ಮವನ್ನು ಇಂದ್ರ, ವರುಣ, ಮಿತ್ರ, ಆರ್ಯಮ, ರುದ್ರ ಯಾರೂ ತಡೆಯಲಾರರು, ಶತ್ರುಗಳು ಹಿಂಸಿಸಲಾರರು.

ವರುಣನು, ಸೂರ್ಯಾಸ್ತನಂತರ ಜಂಗಮಾತ್ಮಕ ಪ್ರಾಣಿಗಳಿಗೆ ಅಗತ್ಯವಾದ ಪೂಜ್ಯ ಸುಖಕರ ಸ್ಥಾನವನ್ನು, ವಿಶ್ರಾಂತಿಗಾಗಿ ಕಲ್ಪಿಸಿದ್ದಾನೆ. ಸಮಸ್ತ ಪಕ್ಷಿಗಳೂ ಸಕಲ ಪ್ರಾಣಿಗಳೂ ಬೇರೆ ಬೇರೆ ದಿಕ್ಕಿನಲ್ಲಿ ಹೋಗಿ, ತಮ್ಮ ತಮ್ಮ ನಿವಾಸವನ್ನು ಸೇರುತ್ತವೆ.

ಜಗತ್ತನ್ನು ಶುದ್ಧಗೊಳಿಸಲು ಗಂಗಾದಿನದಿಗಳು ಕರ್ಮನಿಮಿತ್ತ ಹರಿಯುತ್ತವೆ. ವಾಯುವು ಕ್ರೀಡಿಸುತ್ತದೆ. ಮೃಗಪಕ್ಷಿಗಳು ಉದಕಸಂಬಂಧ ಭಾಗವನ್ನು, ನಿರ್ಜಲ ಅರಣ್ಯದಲ್ಲಿ ಹುಡುಕುವವು ಅಂತರಿಕ್ಷದಲ್ಲಿ ಸವಿತೃವ್ಯಾಪಿಸುತ್ತಾನೆ.

ಮಾತೃ ಉಷಸ್ಸಿಂದ, ಅಗ್ನಿಹೋತ್ರಾಖ್ಯಾ ಭಾಗವು ಅಗ್ನಿಗೆ ದೊರಕಿದೆ. ಗೃಹಸಂಬಂಧಿ ಅಗ್ನಿ ತೇಜಸ್ಸು ಯಜ್ಞಗೃಹದಲ್ಲಿ ಪ್ರಸರಿಸುತ್ತದೆ. ಅಗ್ನಿಯು ಅನ್ನಕ್ಕೆ ಅಧಿಪತಿಯೂ ಆಗಿದ್ದಾನೆ.

ಕಲ್ಯಾಣಾತ್ಮಕ ಆಹ್ವಾನ ಸ್ತುತಿಗಳಿಂದ, ಯಜ್ಞಕರ್ತ ಯಜಮಾನನು ಸವಿತೃವನ್ನು ಸ್ತುತಿಸುತ್ತಾನೆ.

ಧನ ಹಾಗೂ ಪಶುಲಾಭಕ್ಕಾಗಿ, ಕ್ಷೇಮರಕ್ಷಣೆಗಾಗಿ, ಸವಿತೃದೇವನನ್ನು ಪ್ರೀತಿಗೊಳಿಸೋಣ. ದ್ಯುಲೋಕ ಪೃಥ್ವೀಲೋಕ ಅಂತರಿಕ್ಷದಿಂದ ಸುಖಕರ ಧನ, ಬಂಧುಜನ ಯಜಮಾನ ಎಲ್ಲರಿಗೂ ಕ್ಷೇಮ ಉಂಟಾಗಲಿ.

**ಸೂಕ್ತ - 39 (ಗ್ರಾವಾಣೇವ ತದಿದರ್ಥಂ.....**

ಗೃತ್ಸಮದ ಋಷಿ, ಅಶ್ವಿನೀ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಶ್ವಿನೀದೇವತೆಗಳು, ನೇತ್ರಗಳು ಆಕರ್ಷಕ ಶರೀರದವರು. ದಂಪತಿಗಳಂತೆ, ವೃಷಭದ ಶೃಂಗಗಳಂತೆ, ಕಾಣುವ ಯಮಳರಾದ ಅಶ್ವಿನೀ ದೇವತೆಗಳು ಕಾರ್ಯ ಸಮರ್ಥರು. ಶತ್ರುದರ್ಶಕರು, ಯಜ್ಞಕರ್ಮ ಸ್ವರೂಪ ತಿಳಿದವರು. ದರ್ಶಕ ಶಕ್ತಿಯ ಕಣ್ಣುಗಳನ್ನು ಹೊಂದಿ, ನದಿಯಂತೆ, ಬಿರುಗಾಳಿಯಂತೆ ವೇಗವಾಗಿ ಸಂಚರಿಸುತ್ತಾ, ದೋಣಿಯಂತೆ, ರಥದಂತೆ, ಯಜಮಾನನನ್ನು, ದುಃಖದಿಂದ ದಾಟಿಸುತ್ತಾರೆ. ಮಧುರಮಾತಿನಿಂದ ಜೀವನಾಧಾರರಾಗಿ, ಪೋಷಕರಾಗಿ, ಶರೀರರಕ್ಷಣೆ ಮಾಡುವವರು.

ಯಜಮಾನರು ಅಶ್ವಿನೀ ದೇವತೆಗಳಿಗಾಗಿ ಸೋಮರೂಪ ಸ್ತುತಿ ಸ್ತುತಿರೂಪ ಮಂತ್ರಗಳನ್ನು ಆದರದಿಂದ ಅರ್ಪಿಸುತ್ತಾರೆ. ಯಜ್ಞಗೃಹದಲ್ಲಿ ವೀರಪುತ್ರರೊಂದಿಗೆ ಪ್ರಭೂತ ಸ್ತೋತ್ರ ಪಠಿಸುತ್ತಾರೆ.

ಅಶ್ವಿನೀ ದೇವತೆಗಳು ಸ್ತೋತ್ರಗಳನ್ನು ಕೇಳುವವರಾಗಲಿ, ಸ್ತೋತ್ರಗಳನ್ನು ತೀಕ್ಷ್ಣಗೊಳಿಸಲಿ. ಯಜಮಾನನ ಅಭಿಮುಖವಾಗಿ ಜೊತೆಯಾಗಿ ಶೀಘ್ರವಾಗಿ ಬರಲಿ. ಯಜಮಾನನನ್ನು, ಧನದ ಅಭಿಮುಖ ಕರೆದೊಯ್ಯಲಿ. ಮೃತ್ಯುವಿನಿಂದ ರಕ್ಷಿಸಲಿ, ಶರೀರಕ್ಕೆ ಸುಖತರಲಿ. ಸಾಮರ್ಥ್ಯ ಒದಗಿಸಲಿ. ಉದಕಪ್ರೇರಿಸಲಿ ಶತ್ರುಗಳನ್ನು ಹಿಂಸಿಸಲಿ.

**ಸೂಕ್ತ - 40 (ಸೋಮಾಪೂಷಣಾ ಜನನಾ.....**

ಋಷಿಗೃತ್ಸಮದರು ಸೋಮ, ಪೂಷ ಅದಿತಿ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುವರು.

ಸೋಮ ಮತ್ತು ಪೂಷ ದೇವತೆಗಳಿಬ್ಬರೂ, ಪೃಥ್ವಿ ದ್ಯುಲೋಕ ನಿರ್ಮಾಪಕರು, ಅಂಧಕಾರನಾಶಕರು, ಸಕಲದೇವತೆಗಳಿಂದ ಪೂಜಿತರು, ಅಮೃತತ್ವಕ್ಕೆ ಕಾರಣರು. ಸಕಲಲೋಕರಕ್ಷಕರು. ಇವರ ಸಹಾಯದಿಂದಲೇ ಇಂದ್ರನು, ಹಸುಗಳ ಕೆಚ್ಚಲಿನಲ್ಲಿ ಹಾಲು ತುಂಬಿದುದು.

ಸೋಮನು ಸಮಸ್ತ ಭೂತ ಜಾತಗಳನ್ನು ಸೃಷ್ಟಿಸಿದವ. ಧನಪತಿ. ಪೂಷನು ಜಗತ್ತನ್ನು ವೀಕ್ಷಿಸುತ್ತಾ ಪೋಷಿಸುವ ಸಂಚಾರಿ. ಓಷಧಿರೂಪದಲ್ಲಿ ಪೃಥ್ವಿಯಲ್ಲಿ, ಚಂದ್ರರೂಪದಲ್ಲಿ ಅಂತರಿಕ್ಷದಲ್ಲಿ ಸೋಮನೂ, ದ್ಯುಲೋಕದಲ್ಲಿ ಪೂಷನೂ, ನೆಲೆಸಿದ್ದಾರೆ.

ಸೋಮ ಮತ್ತು ಪೂಷರ ರಥಗಳು ಏಳು ಋತುರೂಪ ಚಕ್ರಗಳು. ಐದುಕಡಿವಾಣ,

ಯಜಮಾನನು ಶ್ರೇಷ್ಠಪುತ್ರರೊಂದಿಗೆ ಸೋಮ ಪೂಷರನ್ನು ಪ್ರಭೂತವಾಗಿ ಸ್ತುತಿಸುತ್ತಾನೆ. ಈ ರಥಗಳು ಯಜಮಾನನನ್ನು ಪ್ರೇರಿಸಲಿ. ಸಕಲ ಭೋಗ, ಕೀರ್ತಿ, ಧನವೃಷ್ಟಿಯನ್ನು ಸೋಮ, ಪೂಷರು ಕೊಡಲಿ. ಯಜಮಾನನು ಶತ್ರುವನ್ನು ಜಯಿಸುವಂತಾಗಲಿ. ಅವನ ಕರ್ಮರಕ್ಷಿತವಾಗಲಿ ಮತ್ತು ಪೂರ್ಣಗೊಳ್ಳಲಿ. ಅದಿತಿಯೂ ನಮ್ಮನ್ನು ರಕ್ಷಿಸಲಿ.

## ಸೂಕ್ತ - 41 (ವಾಯೋ ಯೇ ತೇ ಸಹಸ್ರಿಣೋ.....

ಋಷಿಗೃತ್ಸಮದರು ವಾಯು ಇಂದ್ರ ಮಿತ್ರಾವರುಣ ಅಶ್ವಿನೀ ಸರಸ್ವತೀ ದ್ಯಾವಾಪೃಥಿವೀ ಹವಿರ್ಧಾನಿ ವಿಶ್ವೇದೇವತೆಗಳನ್ನು, ಗಾಯತ್ರೀ ಅನುಷ್ಟುಪ್ ಬೃಹತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವಾಯುವು ತನ್ನ ಅಶ್ವ 'ನಿಯುತ್ತು'ಗಳನ್ನು, ಯೋಜಿಸಿದ ಸಹಸ್ರರಥಗಳಲ್ಲಿ ಯಜಮಾನನ ಮನೆಗೆ ಬರಲಿ.

ಮಿತ್ರಾವರುಣರು ಅದಿತಿಪುತ್ರರು. ಸತ್ಯವರ್ಧಕರು. ಜಗದೀಶ್ವರರು. ಜಗತಪ್ರಭುಗಳು. ಕೇಡುಬಯಸದವರು. ಘೃತರೂಪದ ಅನ್ನಉಳ್ಳವರು. ದಾನಯೋಗ್ಯರು. ಧನಕ್ಕೆ ಒಡೆಯರು. ಕಪಟವಿಲ್ಲದವರು ಯಜಮಾನನ ಸಹಸ್ರಸ್ತಂಭದ ಯಜ್ಞಕ್ಕೆ ಬರಲಿ.

ಅಶ್ವಿನೀ ದೇವತೆಗಳು, ಅಸತ್ಯರಹಿತರು ಶಬ್ದಮಾಡುವವರು, ಶತ್ರುದರ್ಷಕರು, ಹೊಗಳಿಕೆಗೆ ಅರ್ಹರಲ್ಲದ ಅಥವಾ ಸಮೀಪಸ್ಥ ಶತ್ರುಗಳು ಕದಿಯಲಾಗದ, ಧನವನ್ನು ಹೊಂದಿರುವವರು. ನಾನಾವಿಧ ಧನ ವೃದ್ಧಿಸುವವರು, ದೇವತೆಗಳು ಗೋ ಅಶ್ವಗಳಿಂದ ಕೂಡಿದ ಮಾರ್ಗದಲ್ಲಿ ಯಜ್ಞಕ್ಕೆ ಬರಲಿ.

ಇಂದ್ರನು ಅಚಲ. ಸರ್ವಜ್ಞ, ಸುಖಕಾರಕ. ಶತ್ರುಜಯಿಸುವವ, ಇಂದ್ರನಿರುವಲ್ಲಿ ಯಜಮಾನನಿಗೆ ಪಾಪವು ಹಿಂದಿನಿಂದ ಸಮೀಪಿಸುವುದಿಲ್ಲ. ಮುಂದಿನಿಂದ ಕಲ್ಯಾಣ ಉಂಟಾಗುತ್ತದೆ.

ಸರಸ್ವತಿಯು, ನದಿಗಳಲ್ಲಿ ಮಾತೃಪ್ರಾಯಳು. ಪ್ರಕಾಶಮಾನಳು. ಅನ್ನಯುಕ್ತಳು. ಉದಕಯುಕ್ತಳು. ದೇವತಾತ್ಮರಲ್ಲಿ ಶ್ರೇಷ್ಠಳು, ಸಕಲ ಅನ್ನಗಳೂ ಸರಸ್ವತಿಯನ್ನು ಆಶ್ರಯಿಸುತ್ತವೆ.

ದ್ಯಾವಾಪೃಥಿವಿಗಳು ಸ್ವರ್ಗಸಾಧಕರು, ಯಜ್ಞಕ್ಕೆ ಕ್ಷೇಮ ಉಂಟುಮಾಡುವವರು, ದ್ಯಾವಾಪೃಥಿವಿಗಳಿಗೂ, ಇವರ ವಾಹಕ ಅಗ್ನಿಗೂ ಪ್ರಾರ್ಥನೆಗಳು.

ವಿಶ್ವೇದೇವತೆಗಳು, ಇಂದ್ರಪ್ರಧಾನ ಮರುತ್ಸಮೂಹ, ಪೂಷನೊಡನೆ ಆಹ್ವಾನ ಕೇಳಿ ಆಸನಾರೂಢರಾಗಲಿ.

ಶೀಘ್ರಶಕ್ತಿಯುತ ಮದಕರ ಹಿತಕರ ಸೋಮವನ್ನು 'ಶೈನಹೋತ್ರ' ವಂಶಸ್ಥ ಯಜಮಾನನು ಸಿದ್ಧಪಡಿಸಿದ್ದಾನೆ. ಗೃತ್ಸಮದರು ಚಿತ್ತಾಕರ್ಷಕ ಪ್ರೀತಿಪಾತ್ರ ಹವಿಸ್ಸನ್ನು ಅರ್ಪಿಸುತ್ತಾರೆ.

ಆಹ್ವಾನಿತ ದೇವತೆಗಳೆಲ್ಲರೂ ಉತ್ತರವೇದಿಕೆಯ ಪಶ್ಚಿಮಭಾಗಕ್ಕೆ ಸೇರಲಿ. ಕೇಡುಬಯಸದ ಹವಿರ್ಧಾನ ದೇವತೆಗಳೊಂದಿಗೆ, ಯಜ್ಞಾರ್ಹದೇವತೆಗಳೂ, ಸೋಮಪಾನಾರ್ಥ ಬಂದು

ಧನಾಭಾವದಿಂದ, ಅಪ್ರಶಸ್ತರಾದ ಯಜಮಾನರು ಧನವೃದ್ಧಿಹೊಂದಲಿ. ಸೋಮಸಂತೃಪ್ತ ಸರಸ್ವತಿಯು ಪುತ್ರಸಂಪತ್ತುಕೊಡಲಿ. ಯಜಮಾನರನ್ನು ಅನುಗ್ರಹಿಸಲಿ.

## ಸೂಕ್ತ - 42 (ಕನಿಕ್ರದಜ್ಜನುಷಂ ಪ್ರಬ್ರುವಾಣ.....

ಗೃತ್ಸಮದ ಋಷಿ ಕಪಿಂಜಲರೂಪಿ ಇಂದ್ರನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕಪಿಂಜಲ ಪಕ್ಷಿಯು ಮುಂದೆ ಉತ್ಪನ್ನವಾಗುವುದನ್ನು ತನ್ನ ಶಬ್ದದ ಮೂಲಕ, ಮುಂದಾಗಿಯೇ ಸೂಚಿಸುತ್ತದೆ.

ಕಪಿಂಜಲ ಪಕ್ಷಿಗೆ ಮಂಗಳವಾಗಲಿ. ದಕ್ಷಿಣದಲ್ಲೆ ಇದ್ದು ಪದೇಪದೇ ಮಂಗಳಾತ್ಮಕವಾದ ಕಲ್ಯಾಣಾತ್ಮಕ ಶಬ್ದ ಮಾಡುತ್ತಿರಲಿ. ಯಜಮಾನನು ಪುತ್ರರೊಡಗೂಡಿ, ಕಪಿಂಜಲ ಪಕ್ಷಿಯ ಪ್ರೌಢ ಗುಣಗಾನ ಮಾಡುತ್ತಾನೆ.

ಕಪಿಂಜಲಪಕ್ಷಿಯನ್ನು ಶ್ಯೇನಪಕ್ಷಿಯಾಗಲೀ, ಗರುಡನಾಗಲೀ ಹಿಂಸಿಸದಿರಲಿ, ಬೇಡನಾಗಲೀ ಅವನ ಬಾಣವಾಗಲೀ, ಅವನ ಧ್ವನಿಯಾಗಲೀ ಕಪಿಂಜಲಪಕ್ಷಿಯನ್ನು ಸಮೀಪಿಸದಿರಲಿ.

ಶಬ್ದಮಾಡುವ ಕಳ್ಳನು ತನ್ನ ಶಕ್ತಿಯನ್ನೂ, ಪಾಪಮಾಡುವ ಶತ್ರುವು ತನ್ನ ಪ್ರಭಾವವನ್ನೂ ತೋರಿಸದಿರಲಿ.

ಯಾವ ದಿಕ್ಕಿನಿಂದಲೂ ಯಾವ ವಿಧವಾದ ವಿಪತ್ತೂ ಸಮೀಪಿಸದಿರಲಿ.

## ಸೂಕ್ತ - 43 (ಪ್ರದಕ್ಷಿಣಿ ದಭಿ ಗೃಣಂತಿ ಕಾರವೋ.....

ಋಷಿಗೃತ್ಸಮದರು ಕಪಿಂಜಲರೂಪೀ ಇಂದ್ರದೇವನನ್ನು, ಜಗತೀ ಮತ್ತು ಅತಿಶಕ್ವರಿರ್ಯಷ್ಟಿ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಕಪಿಂಜಲ ಪಕ್ಷಿಯು, ಋತುಕಾಲಕ್ಕೆ ಸರಿಯಾಗಿ, ಸಮವಾದಕರಂತೆ ಗಾನಮಾಡುತ್ತಾ ಎರಡುವಾಕ್ಕುಗಳನ್ನು, ಉಚ್ಚರಿಸುತ್ತದೆ. ಸಂತೋಷ ಸೂಚಕ ಶಬ್ದದಿಂದ ಕೇಳುವವರನ್ನು, ಸಂತೋಷಗೊಳಿಸುತ್ತದೆ. ಋತುಕರ್ಮ ಪ್ರಕಟಿಸುತ್ತದೆ.

ಯಜಮಾನರು, ಸತ್ಪುರುಷರ ಜೊತೆ ಕಪಿಂಜಲ ಪಕ್ಷಿಯ ಗುಣಗಾನ ಮಾಡುತ್ತಾ ಇರುತ್ತಾರೆ.

ಕಪಿಂಜಲ ಪಕ್ಷಿಯು ಎಲ್ಲಕಡೆಗಳಿಂದಲೂ, ಮಂಗಳ ಹೇಳಲಿ. ಪಾಪರಹಿತ ಕಲ್ಯಾಣ ಪ್ರಕಟಿಸಲಿ. ಶಬ್ದಮಾಡದೇ ಹಾರುವಾಗ, ವೀಣಾವಾದ್ಯದಂತೆ ಮಧುರ ಶಬ್ದಮಾಡಲಿ.

-----

ಸೂಕ್ತ -13 (ಪ್ರ ವೋ ದೇವಾಯಾಗ್ನಯೇ.....

ಋಷಿ ಋಷಭೋವೈಶ್ವಾಮಿತ್ರರು ಅಗ್ನಿದೇವನನ್ನು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸರ್ವಕರ್ಮ ನಿಯಾಮಕ, ಯಜ್ಞಮಾರ್ಗದರ್ಶಿ, ಜ್ಯೋತಿಷ್ಟೋಮಾದಿ ಯಾಗ ನಿಯಾಮಕ, ಶ್ರೇಷ್ಠಧನಾನುಗ್ರಹಿ.

ವಾಯುವಿನಿಂದ ವರ್ಧಿತನಾಗುವ, ಅಪರಿಮಿತಧನದಾತ ಅಗ್ನಿಯು, ಐಹಿಕ ಆಮುಷ್ಮಿಕ ಸುಖ ಅನುಗ್ರಹಿಸುವವನು. ಅಗ್ನಿಯಿಂದ ಸ್ವರ್ಗ ಭೂಲೋಕ ಉದಕಗಳು, ವ್ಯಯವಾದಷ್ಟೂ ವೃದ್ಧಿಸುವ ಧನಲಬ್ಧವಾಗುವಂತೆ ಆಗುತ್ತದೆ.

ಹೋತ್ರಾದಿ ಋತ್ವಿಜರು, ಶ್ರೇಷ್ಠ ಶಸ್ತ್ರಾದಿಸ್ತುತಿ, ಆಹುತಿಗಳನ್ನು, ಕ್ರಮವಾಗಿ ನ್ಯೂನಾತಿರಿಕ್ತ-ವಿಲ್ಲದಂತೆ, ಹವಿರ್ಯುಕ್ತ ಕರ್ಮಗಳಿಂದ ಉದ್ದೀಪನಮಾಡಿ, ಅಗ್ನಿಯನ್ನೂ, ದೇವತೆಗಳಿಗೆ ಹವಿರರ್ಪಿಸಲು ಪ್ರಾರ್ಥಿಸುತ್ತಾರೆ.

ಅಗ್ನಿಯು, ತ್ವಾಷ್ಟ್ರಾದಿ ದೇವತೆಗಳೊಂದಿಗೆ, ಪೂಜ್ಯಯಾಗಶಾಲೆಯಲ್ಲಿ ದರ್ಭಾಸೀನನಾಗಲಿ.

ಯಜಮಾನನು ರಕ್ಷಣೆ ಸುಖ ಅನುಗ್ರಹಕ್ಕಾಗಿ ಅಗ್ನಿಯನ್ನೇ ಆಶ್ರಯಿಸುತ್ತಾನೆ.

ಅಗ್ನಿಯು ಯಜಮಾನನಿಗೆ ಅಭಿವೃದ್ಧಿಕಾರಕ ಸುಖ, ಅಗ್ನಿಹೋತ್ರಾದಿಗಳಿಗೆ ಸೂಕ್ತಗೃಹ, ಪಶು ಪುತ್ರಪೌತ್ರಾದಿಗಳು, ಪುಷ್ಟಿಕಾರಕ ವ್ಯವಹಾರಯೋಗ್ಯ, ಅಪರಿಮಿತ ಅಕ್ಷಯ ರತ್ನ ಕನಕ ಅನುಗ್ರಹಿಸಲಿ.

ಸೂಕ್ತ – 14 (ಆ ಹೋತಾ ಮಂದ್ರೋ.....

ಋಷಿ ಋಷಭೋ ವೈಶ್ವಾಮಿತ್ರರು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಜ್ವಾಲಾರೂಪಿ, ಕೇಶಧಾರಿ, ಸ್ತೋತೃ ಆನಂದದಾಯಕ ಅಗ್ನಿಯು, ದೇವತಾಹ್ವಾನಕರ್ತ, ಸರ್ವಪ್ರೇರಕ, ಮಾರ್ಗದರ್ಶಕ, ವಿದ್ಯುತ್‌ರಥದವ; ದೇವತೆಗಳನ್ನೂ, ಜ್ಞಾನಿಗಳನ್ನೂ, ಯಜ್ಞಕ್ಕೆ ಕರೆತರುವವನಾಗಿದ್ದಾನೆ.

ಒಂದಾದಮೇಲೆ ಒಂದರಂತೆ ಬರುತ್ತಿರುವ, ಪರಸ್ಪರ ಸಂಸಕ್ತವಾದ ಅಹೋರಾತ್ರಿಗಳು, ವಾಯುಮಾರ್ಗದಿಂದ ಬರುತ್ತಿರುವ ಅನ್ನದಾತೃಗಳು, ಮಿತ್ರಾವರುಣ ಮರುತ್ತಾದಿಗಳು, ರಶ್ಮಿಪರದುವವನಾದ ಅಗ್ನಿಗೆ, ಸಾಯಂಪ್ರಾತಃಗಳಲ್ಲಿ ಆಜ್ಯಾದಿ ಹವಿರರ್ಪಣೆಯನ್ನು ಮೊದಲು ಸಲ್ಲಿಸುತ್ತಾರೆ.

ಯಾಷ್ಟವ್ಯದೇವನಾದ ಅಗ್ನಿಯು, ಭೂಮಿಯಲ್ಲಿ ತನ್ನ ಸಾಮರ್ಥ್ಯಪ್ರಕಟಿಸುತ್ತಾನೆ.

ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡುವ ಪ್ರಬಲಇಚ್ಛೆಯಿಂದ ಯಜಮಾನರು ಅಗ್ನಿಯನ್ನು ಆಹ್ವಾನಿಸುತ್ತಾರೆ. ಅಗ್ನಿಯು ದರ್ಭಾಸೀನನಾಗಲಿ. ಅಗ್ನಿಯು ದೇವತೆಗಳನ್ನು ಹೆಚ್ಚಾಗಿಸ್ತುತಿಸಿ, ಪ್ರಿಯವಾದ ಸ್ತುತಿ ಹವಿಸ್ಸು ಪುರೋಡಾಶ, ನಮಸ್ಕಾರಗಳನ್ನು ಅರ್ಪಿಸಲಿ.

ಸನ್ಮಾರ್ಗಗಾಮಿ ಪುತ್ರನನ್ನು ಅನುಗ್ರಹಿಸಲಿ.

**ಸೂಕ್ತ -15 (ವಿ ಪಾಜಸಾ ಪೃಥುನಾ ಶೋಶುಚಾನೋ.....**

ಉತ್ಕೀಲಃ ಕಾತ್ಯಋಷಿಗಳು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಕಲವನ್ನೂ ತಿಳಿದ ಶ್ರೇಷ್ಠಮಾರ್ಗದರ್ಶಿ. ಸಕಲವನ್ನೂ ಜೀರ್ಣಸಿಕೊಳ್ಳುವವ. ಅಭಿಮತಫಲಪ್ರದಿಕಾರಿ, ಗವಾದಿ ಸಂಪತ್‌ಫಲದಾತ.

ಮಾನವರ ಶುಭಾಶುಭ ಕರ್ಮಗಳನ್ನು ನೋಡುತ್ತಾ, ಎಲ್ಲವನ್ನು ಅದರದರ ಸ್ಥಾನಗಳಲ್ಲಿ ಇಡುವವನಾಗಿದ್ದಾನೆ. ಶತ್ರುಪಟ್ಟಣ ಹಾಗೂ ಅವರ ಐಶ್ವರ್ಯಗಳನ್ನು ಜಯಿಸಿ ಅಗ್ನಿಯು ಯಜ್ಞದ್ವೇಶಿ ಹಾಗೂ ರಾಕ್ಷಸರ ನಾಶಮಾಡುತ್ತಾನೆ.

ಯಜಮಾನನನ್ನು ಅವನ ಕರ್ಮದೊಡನೆ ಸೇರಿಸಿ, ಜ್ಯೋತಿಷ್ಟೋಮಾದಿ ಹೋಮ ನಿರ್ವಹಿಸುತ್ತಾನೆ. ಇಳಾದೇವಿಗೆ ಹವಿಸ್ಸು ಒದಗಿಸಿ, ದ್ಯಾವಾಪೃಥ್ವಿಗಳನ್ನು ಪ್ರಶಂಸಿಸಿ, ವೃಷ್ಟಿಸುವಂತೆ ಮಾಡುತ್ತಾನೆ.

ಯಜಮಾನಾರ್ಪಿತ ಸ್ತೋತ್ರಾದಿ ಹವಿಸ್ಸುಗಳನ್ನು, ಪ್ರೀತಿಯಿಂದ ಸೇವಿಸುತ್ತಾನೆ.

ಅಗ್ನಿಯು ಯಜಮಾನನನ್ನು ಕರ್ಮಲೋಪ ರಹಿತನಾಗುವಂತೆ ಮಾಡಲಿ. ಅವನ ದಾರಿದ್ರ್ಯ ನಾಶಮಾಡಲಿ. ಶತ್ರುವಿನ ದುಷ್ಟಬುದ್ಧಿ ಅಪಕಾರಗಳು, ತಗಲದಂತೆಮಾಡಿ ಉಷಃಕಾಲದಲ್ಲಿ ರಕ್ಷಿಸಲಿ. ಅನುಗ್ರಹ ಬುದ್ಧಿಯಿಂದ, ಯಜಮಾನನಿಗೆ, ಅನ್ನ ಗವಾದಿಸಂಪತ್ತು, ತೃಪ್ತಿ, ಪುತ್ರಪೌತ್ರರನ್ನು ಅನುಗ್ರಹಿಸಲಿ.

**ಸೂಕ್ತ -16 (ಅಯಮಗ್ನಿಃ ಸುವೀರ್ಯಸ್ಯೇಶೇ.....**

ಋಷಿ ಉತ್ಕೀಲಕಾತ್ಯರು ಅಗ್ನಿದೇವನನ್ನು ಬೃಹತೀ ಮತ್ತು ಸತೋಬೃಹತೀ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಅಗ್ನಿಯು ಸಕಲ ಜಗತ್‌ವ್ಯಾಪಕ, ಸುಖವರ್ಧಕ, ಪಶು, ಧನ, ಪುತ್ರ ಸಂಪತ್ತಿಗೊಡೆಯ.

ಯಜಮಾನಾರ್ಪಿತ ಹವಿಸ್ಸನ್ನು ದೇವತೆಗಳಿಗೆ ತಲುಪಿಸುವವರೆಗೆ ಯುದ್ಧದಲ್ಲಿ ಸಹಾಯ ಮಾಡುತ್ತಾ ಯಜಮಾನರ ಸ್ತುತಿಸ್ತೋತ್ರಗಳನ್ನು ಪ್ರೇರಿಸುತ್ತಾನೆ.

ಶತ್ರುಗಳನ್ನು ಸೋಲಿಸುವ, ದ್ವೇಷಿ ದುಷ್ಟರನ್ನು ನಾಶಮಾಡುವ, ಶಕ್ತಮರುತ್ತುಗಳು ಅಗ್ನಿಯನ್ನು ಸೇವಿಸಲಿ.

ಅಗ್ನಿಯು ಯಜಮಾನರನ್ನು, ದಾರಿದ್ರ್ಯ, ಪುತ್ರಹೀನತ್ವ, ಪಶುಹೀನತ್ವ, ಇತರರನಿಂದ ಇವುಗಳಿಗೆ ಪಾತ್ರಮಾಡದಿರಲಿ. ಪರಸ್ಪರ ದ್ವೇಷಾಸೂಯೆಗಳು ದೂರವಾಗಿ, ನಾಶವಾಗುವಂತಾಗಲಿ.

ಯಜಮಾನನು ಪುತ್ರಪೌತ್ರಾದಿ ಐಶ್ವರ್ಯ, ಆರೋಗ್ಯ ಶಕ್ತಜನ ಧನದಿಂದ ಸಮೃದ್ಧಿಗೊಳ್ಳಲಿ.

ಸೂಕ್ತ –17 (ಸಮಿಧ್ಯಮಾನಃ ಪ್ರಥಮಾನು.....

ಋಷಿ ಕತೋ ವೈಶ್ವಾಮಿತ್ರರು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು, ದೇವತೆಗಳ ಅನ್ನಕ್ಕೆ ಅಮೃತನಾಭಿಸ್ಥಾನಿ, ಧರ್ಮವಿಷಯವನ್ನರಿತವ, ವಿಷಯಾಸಕ್ತನಲ್ಲದವ, ಶ್ರೇಷ್ಠಯಜ್ಞದಿಂದ ಕೂಡಿದ ಶುದ್ಧಕರ್ಮಿ, ಉತ್ಪನ್ನವಾದ ಸಕಲವನ್ನೂ ತಿಳಿದವ, ಎಲ್ಲಿಂದಲೂ ಅತಿಶಯವಾಗಿ ನೋಡಲ್ಪಡುವವ, ಯಜ್ಞಾರಂಭಕಾಲದಲ್ಲಿ ಪ್ರಜ್ವಲಿತನಾಗಿ ಅಂಜನಾದಿಗಳಿಂದ ಅಲಂಕೃತನಾದವ.

ಆಜ್ಯ, ಓಷಧಿ, ಸೋಮ ಇವು ಆಯುರ್ದಾಯಕಗಳು, ಉಷೋಭಿಮಾನಿಯಾದ ಮೂವರೂ ದೇವಿಯರೂ ಅಗ್ನಿಗೆ ಸಹೋದರಿಯರು. ಇಂದ್ರಾದಿ ದೇವತೆಗಳಿಗೆ ಅಗ್ನಿ ಹವಿರ್ದೂತ.

ಅಗ್ನಿಯು ಜ್ಞಾನಕ್ಕಾಗಿ ಪೃಥ್ವಿ ದ್ಯುಲ್ಲೋಕ, ಅಂತರಿಕ್ಷ ಲೋಕವನ್ನು ಉದ್ದೇಶಿಸಿ ಮಾಡಿದ ಮನುಯಜ್ಞವನ್ನು, ಸರ್ವಜ್ಞನಾಗಿ ಈ ಹಿಂದೆ ಸಾಂಗಗೊಳಿಸಿದ್ದಾನೆ.

ಯಜಮಾನನು ಸ್ತುತ್ಯನಾದ ಅಗ್ನಿಯನ್ನು ಸ್ತುತಿಸುತ್ತಾನೆ. ಹಿಂದೆ ಹೋತೃವಾಗಿ ನಡೆಸಿಕೊಟ್ಟಂತೆ ಅಗ್ನಿಯು ದೇವತೆಗಳೊಡಗೂಡಿ, ಯಾಗ ನಡೆಸಿಕೊಡಲಿ. ಯಜಮಾನನಿಗೆ ಸುಖಕೊಡಲಿ.

**ಸೂಕ್ತ -18 (ಭವಾ ನೋ ಅಗ್ನೇ ಸುಮನಾ.....**

ಋಷಿ ಕತೋ ವೈಶ್ವಾಮಿತ್ರರು, ಅಗ್ನಿದೇವನನ್ನು, ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು, ಸಕಲ ವಸ್ತುಗಳನ್ನೂ ಅವುಗಳ ಸ್ಥಾನಗಳಲ್ಲಿಡುವವ, ಪ್ರತಿಬಂಧರಹಿತ ರಶ್ಮಿಯುಳ್ಳವ, ವಿಷಯ ಜ್ಞಾನವುಳ್ಳವ, ಕರ್ಮಿಗಳಿಂದ ಪರಿಷ್ಕೃತ ಧನಕೊಡಲಿಚ್ಛಿಸುವವನಾಗಿ, ಅಗ್ನಿಯು ಸೋಮಾಜ್ಯಾದಿಗಳಿಂದ ಪ್ರಜ್ವಲಿತನಾದೊಡನೆಯೇ, ದಾತೃವಾಗುತ್ತಾನೆ.

ಸೋಮ, ಆಜ್ಯ, ಪಯಸ್ಸುಗಳಿಂದ ಪೋಷಿತನಾಗಿ ಸ್ತೋತ್ರ ಹವಿಸ್ಸು ಪುರೋಡಾಶಗಳಿಂದ ವೇಗಪ್ರಸಾರ ಶಕ್ತಿಸಾಮರ್ಥ್ಯ ಪಡೆದು, ಅಗ್ನಿಯು ಪ್ರಜ್ವಲನ ವೃದ್ಧಿಗೊಳ್ಳುತ್ತಾನೆ.

ಅಗ್ನಿಯು ಆಕ್ರಮಣಕಾರಿ ಶತ್ರುಗಳನ್ನು ದಹಿಸಿ, ಶತ್ರುವಿನ ಮನಸ್ಸಿನ ಇಷ್ಟಾರ್ಥನಾಶಮಾಡಿ, ಕರ್ಮ ಅನಾಸಕ್ತರನ್ನು ಹಿಂಸಿಸಲಿ.

ಯಜಮಾನನ ಗೃಹದಲ್ಲಿ ಕರ್ಮವೃದ್ಧಿಮಾಡಿ, ಸ್ತುತಿವೃದ್ಧಿಮಾಡಿ, ಭಯರಾಹಿತ್ಯ ಉಂಟುಮಾಡಲಿ. ಸ್ತುತಿ ಸಫಲಗೊಂಡು, ಯಜಮಾನನು ಧನಯುಕ್ತ ಅನ್ನಯುಕ್ತ ರೋಗರಹಿತ ಸುಖ ಹೊಂದಲಿ. ಸಹಜ ಪ್ರಕಾಶಕನಾಗಲಿ.

**ಸೂಕ್ತ - 19 (ಅಗ್ನಿಂಹೋತಾರಂ ಪ್ರ ವೃಣೇ.....**

ಋಷಿ ಗಾಥೀಗಳು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಅತ್ಯುತ್ತಮ ಯಜ್ಞಕರ್ತ, ಅತ್ಯುತ್ತಮ ದಾತೃ, ಕರ್ಮ ಫಲಕಾರಿ, ತೀವ್ರ ಆಸಕ್ತಿಯಿಂದಿರುವವ, ಅಂಗನಾದಿ ಗುಣಗಳುಳ್ಳವ, ಭ್ರಾಂತನಲ್ಲದವ.

ಘೃತಲೇಪನದಿಂದ ಪ್ರೋಷಿಸುತ್ತಾರೆ. ಅಗ್ನಿಯು ದೇವತೆಗಳಿಗೆ ಘೃತಸಿದ್ಧಪಡಿಸುತ್ತಾನೆ.

ಅಗ್ನಿಯು ದೇವಸಂಬಂಧ ತೇಜಸ್ಸು ಶಕ್ತಿ ಉದ್ದೇಶಿಸಿ, ಯಜ್ಞಾರ್ಹ ದೇವತೆಗಳನ್ನು ಯಜ್ಞಕ್ಕೆ ಕರೆತರಲಿ, ತಾನೂ ಮಾನವ ರಕ್ಷಕನಾಗಿರಬೇಕೆಂಬ ಉದ್ದೇಶವನ್ನು ಅಗ್ನಿ ತಿಳಿಯಲಿ.

ಯಜಮಾನನಿಂದ ಅರ್ಪಿತ ಪೂಜ್ಯ ಹವಿಸ್ಸು ಆಹುತ್ಯರ್ಪಣೆಯನ್ನು, ಪೂರ್ಣ ಯಜ್ಞಮಾಡಿ ಸ್ವೀಕರಿಸಲಿ. ಯಜಮಾನನಿಗೆ ಲಭ್ಯವಾಗಬೇಕಾದ ಅನ್ನ, ಧನ, ಶ್ರೇಷ್ಠ ಸಂತತಿ ಉತ್ತಮ ಪ್ರಭಾವ, ಆಶ್ರಯ ಕೊಡಲಿ. ಆಪತ್ತುಗಳನ್ನು ನಿವಾರಿಸಲಿ.

## ಸೂಕ್ತ - 20 (ಅಗ್ನಿಮುಷಸಮಶ್ವಿನಾ ದಧಿಕ್ರಾಂ.....

ಋಷಿ ಗಾಥೀಗಳು, ಅಗ್ನಿ ಮತ್ತು ವಿಶ್ವೇದೇವತೆಗಳನ್ನು, ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಉಷಃಕಾಲದಲ್ಲಿ, ಯಜ್ಞಕರ್ತನು ಯಜ್ಞಾಪೇಕ್ಷಿದೇವತೆಗಳನ್ನು, ಯಜ್ಞಕ್ಕೆ ಆಹ್ವಾನಿಸುತ್ತಾನೆ. ಉಷೋದೇವತೆ, ದಧಿಕ್ರಾ ದೇವತೆಗಳನ್ನೂ, ಬೃಹಸ್ಪತಿ, ಸವಿತೃ, ಅಶ್ವಿನೀ, ಮಿತ್ರಾವರುಣ, ಭಗ, ವಸು, ರುದ್ರ, ಆದಿತ್ಯರುಗಳನ್ನೂ ಯಜ್ಞಾಗ್ನಿಯನ್ನೂ ಹವಿಸ್ಸ್ವೀಕಾರಕ್ಕೆ ಕರೆಯುತ್ತಾರೆ.

ಯಜ್ಞದಲ್ಲಿ ಉತ್ಪನ್ನನಾಗಿ ಹವಿಸ್ಸನ್ನು ವಹಿಸುವ ವೃತ್ರನಾಶಕ ಅಗ್ನಿಯು, ದೇವರೂಪ ಮಾನವ ಪ್ರಜೆಗಳಿಗೆ ನಿಯಮಿತವಾದ ನೇತೃವಾಗಿದ್ದಾನೆ.

ಅಗ್ನಿಯು, ಮೂರು ಮೂರು, ಅನ್ನ, ಸ್ಥಾನ, ನಾಲಿಗೆ, ಶರೀರಗಳನ್ನು ಹೊಂದಿದ್ದಾನೆ. ಈ ಅವಯವಗಳಿಂದ ಸ್ತುತಿಕರ್ತನ ವಾಕ್ಯಗಳನ್ನು ಸಾವಧಾನದಿಂದ ಕೇಳಲಿ.

ಅಗ್ನಿಯಲ್ಲಿ ಅನೇಕ ದೇವತೆಗಳಲ್ಲಿನ ಅನೇಕ ತೇಜಸ್ಸುಗಳೂ, ಅಸುರರಲ್ಲಿರುವ ಪಂಚಶಕ್ತಿಗಳೂ, ಸ್ಥಾಪಿತವಾಗಿವೆ. ಆ ಶಕ್ತಿಯಿಂದ ಅಸುರರನ್ನು ತಡೆದು ಯಜ್ಞಪಾಲಿಸಲಿ. ಸ್ತೋತ್ರ ಮಾಡತಕ್ಕ ಭಕ್ತರನ್ನು ಸಕಲ ಪಾಪಗಳಿಂದ ದಾಟಿಸಿ ಸುರಕ್ಷಿತ ದಡ ಸೇರಿಸಲಿ.

## ಸೂಕ್ತ - 21 (ಇಮಂ ನೋ ಯಜ್ಞಮಮೃತೇಷು......

ಗಾಥೀಋಷಿಗಳು, ಅಗ್ನಿ ದೇವನನ್ನು ತ್ರಿಷ್ಟುಪ್, ಅನುಷ್ಟುಪ್, ವಿರಾಡ್ರೂಪಾ, ಸತೋಬೃಹತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ತಡೆಯಿಲ್ಲದೇ ಪ್ರಸರಿಸುವವ, ಶಕ್ತಿವಂತ, ಮೊದಲ ಹೋತೃ, ಉತ್ಕೃಷ್ಟ ಪ್ರಜ್ವಲಿತ, ಅತೀಂದ್ರಿಯಾರ್ಥ ನೋಡಲು ಶಕ್ತ.

ಸರ್ವಾಂಗಗಳಿಂದ ಕೂಡಿದ ಯಜ್ಞದಲ್ಲಿ, ವೇದಿಕೆಯಲ್ಲಿ ಕುಳಿತು, ಪಶುಯಜ್ಞವನ್ನು ಅಮರ್ತ್ಯ ದೇವತೆಗಳಿಗೆ, ಅಗ್ನಿಯು ಸಮರ್ಪಿಸಲಿ. ಪಶುವಿನ ಮಧ್ಯಭಾಗದಿಂದ ತೆಗೆದ, ಸಾರಯುಕ್ತ ವಪಾರೂಪಿ, ಮೇದೋರೂಪಿ, ಹವಿಸ್ಸು ಅದರ ಮೇಲಿನ ಘೃತಬಿಂದು, ಇವುಗಳನ್ನು ದೇವತೆಗಳಿಗೂ ವಿಭಾಗಮಾಡಿ ಹಂಚಿ, ತಾನೂ ಸ್ವೀಕರಿಸಲಿ.

ಯಜಮಾನನ ಯಾಗರಕ್ಷಕನಾಗಿ, ಉತ್ತಮ ಅಪೇಕ್ಷಿತ ಫಲ ಕೊಡಲಿ.

ಸೂಕ್ತ – 22 (ಅಯಂ ಸೋ ಅಗ್ನಿರ್ಯಸ್ಮಿನ್ಸೋಮಮಿಂದ್ರಃ.....

ಗಾಥೀಋಷಿಗಳು, ಪುರೀಷ್ಯಾ ಅಗ್ನಿ ದೇವತೆಗಳನ್ನು ತ್ರಿಷ್ಟುಪ್ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಅಗ್ನಿಯು ನಾನಾವಿಧದಲ್ಲಿ ಸ್ತುತಿಸಲ್ಪಡುತ್ತಾನೆ.

ಅಗ್ನಿಯು ಯಜ್ಞಾರ್ಹ, ಉತ್ತರ ವೇದಿಸ್ಥಿತ, ಇಂದ್ರನಿಗೆ ಸೋಮ ತೃಪ್ತಿ ಮಾಡಿದವ, ಉತ್ಪನ್ನವಾದ ಸಕಲ ವಸ್ತುವನ್ನೂ ತಿಳಿದವ, ಊರ್ಧ್ವಮುಖನಾಗಿದ್ದು ದ್ಯುಲ್ಲೋಕ ಸೇರುತ್ತಾನೆ.

ತೇಜೋರೂಪಿ ಅಗ್ನಿಯು, ವಾಯು ರೂಪದಲ್ಲಿ ಅಂತರಿಕ್ಷವನ್ನು ತೇಜಸ್ಸಿನಿಂದ ವ್ಯಾಪಿಸಿ ಪ್ರಾಣರೂಪ ದೇವತೆಗಳನ್ನು ಒಂದಾಗುವಂತೆ ಸೇರಿಸುತ್ತಾನೆ.

ಆದಿತ್ಯನು ಆಹವನೀಯ, ವನಸ್ಪತಿ ಉದಕ ರೂಪಗಳಲ್ಲಿರುವ ತೇಜೋರೂಪಿ ಅಗ್ನಿಯು, ಸೂರ್ಯಲೋಕದ ಮೇಲ್ಭಾಗ ರೋಚಕವೆಂಬ ಹೆಸರಿನ ಲೋಕವನ್ನು-ಕೆಳಗಿನ ಅಂತರಿಕ್ಷವನ್ನು ಚೈತನ್ಯಗೊಳಿಸುತ್ತಾ ಚೈತನ್ಯಪ್ರವಹಿಸುವಂತೆ ಮಾಡುತ್ತಾನೆ.

ಮರಳುಕುಂಡ ಮತ್ತು ಅದನ್ನು ಅಗೆವ ಸಾಧನ, ಇವುಗಳನ್ನು ಚಿತಾಗ್ನಿರೂಪದಲ್ಲಿ ಚೆನ್ನಾಗಿ ಸೇರಿಸುತ್ತಾನೆ.

ಇಳಾನಾಮಕ ಭೂದೇವಿಯು, ಯಾಗಾಚರಣೆಗೆ ಅನುಕೂಲಿಸುವ ಅನೇಕ ಕರ್ಮ ಸಹಾಯದಿಂದ, ಗವಾದಿ ಪಶುಗಳನ್ನು ಕೊಡಲಿ. ಅಹಿಂಸಕ ರೋಗವರ್ಜಿತ ಅನ್ನವನ್ನು ಕೊಡಲಿ. ಪುತ್ರಪೌತ್ರಾದಿಗಳನ್ನು ಅನುಗ್ರಹಿಸಬೇಕೆಂಬ ಬೇಡಿಕೆಯನ್ನು, ಯಜಮಾನನಿಗೆ ಸಫಲಗೊಳಿಸಲಿ.

**ಸೂಕ್ತ - 23 (ನಿರ್ಮಥಿತಃ ಸುಧಿತ ಆ ಸಧಸ್ಥೇ.....**

ದೇವಶ್ರವಾ ದೇವವಾತಶ್ಚ ಭಾರತ ಋಷಿಗಳು, ಅಗ್ನಿದೇವನನ್ನು, ತ್ರಿಷ್ಟುಪ್ ಮತ್ತು ಸತೋಬೃಹತಿ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಪ್ರಭುದ್ಧ ಕಾಂತಿದರ್ಶಿ, ಶ್ರೇಷ್ಠ ಯಜ್ಞನಿರ್ವಾಹಕ, ಅರಣಿಗಳಿಂದ ಕಡೆಯಲ್ಪಟ್ಟು ಗಾರ್ಹಪತ್ಯಾದಿ ಕುಂಡಗಳಲ್ಲಿ ಇಡಲ್ಪಟ್ಟವ. ಮಹಾರಣ್ಯಗಳು ದಾವಾಗ್ನಿಯಿಂದ ಜೀರ್ಣವಾಗುತ್ತಿದ್ದರೂ ಜರಾರಹಿತ, ಸ್ತುತಿಕರ್ತರ ಪರಾಧೀನ, ವಿಶೇಷವಾಗಿ ಭೂಮಿಯಲ್ಲಿ ಸ್ಥಾಪಿತನಾದವ.

ದೇವಶ್ರವ ಮತ್ತು ದೇವವಾತರು, ಭರತಪುತ್ರರು, ಅಗ್ನಿಯನ್ನು, ಮಥಿಸಿ ಉತ್ಪಾದಿಸುವವರು. ಮತ್ತು ತಮ್ಮ ಹತ್ತು ಬೆರಳುಗಳಿಂದ ಅಗ್ನಿಯನ್ನು ಉತ್ಪಾದಿಸಿದರು.

ಯಜ್ಞಕರ್ತನು ವಿಶೇಷವಾಗಿ ಸಂಚರಿಸುವ 'ದೃಷದ್ವತಿ, ಅಪಯಾ, ಸರಸ್ವತೀ ಪದಗಳ ಮೇಲೆ ಧನಯುಕ್ತನಾಗಿ ಸಂಚರಿಸಲಿ' ಎಂದು ಅಗ್ನಿಯಲ್ಲಿ ಪ್ರಾರ್ಥಿಸುತ್ತಾನೆ. ಅನುಗ್ರಹದಿಂದ ಪ್ರತಿದಿನ ಅನ್ನತರುವವನಾಗಿ, ಪುತ್ರಪೌತ್ರಾದಿಗಳನ್ನು ಅನುಗ್ರಹಿಸಲಿ. ಭೂದೇವಿಯು, ಅಗ್ನಿಯ ಯಾಗಾಚರಣೆಗಳಿಗೆ ಅನುಕೂಲಕಳಾಗಲಿ.

**ಸೂಕ್ತ - 24 (ಅಗ್ನೇ ಸಹಸ್ವ ಪೃತನಾ..................**

ಋಷಿ ವಿಶ್ವಾಮಿತ್ರರು, ಅಗ್ನಿದೇವನನ್ನು, ಅನುಷ್ಟುಪ್ ಮತ್ತು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಉತ್ತರವೇದಿಕೆಯಲ್ಲಿ ಪ್ರಜ್ವಲಿತನಾಗಿ, ಯಜ್ಞದಿಂದ ತೃಪ್ತನಾಗಿ, ಸ್ವತೇಜಸ್ಸಿನಿಂದ ಲೋಕರಕ್ಷಣೆಗಾಗಿ, ಎಚ್ಚರವಾಗಿರುವವ.

ಪೂಜಕ ಯಜ್ಞಕರ್ತರ ಯಜ್ಞದಲ್ಲಿ, ಸಮಸ್ತರೂಪಾಂತರ ಅಗ್ನಿಗಳೊಂದಿಗೆ, ಯಜಮಾನರ ಸ್ತುತಿಗಳನ್ನು ಗೌರವದಿಂದ ಕೇಳಲಿ. ಅಗ್ನಿಷ್ಟೋಮ ಯಜ್ಞವನ್ನೂ, ಪ್ರೀತಿಯಿಂದ ಸೇವಿಸಲಿ.

ಅಹಂಕಾರಿ, ಯಜ್ಞವಿಘ್ನಕಾರಿ, ಶತ್ರುಗಳನ್ನು ದೂರತಳ್ಳಿ, ಪ್ರತಿಭಟಿಸುವ ಸೇನೆಗಳನ್ನು ಸೋಲಿಸಿ, ಅಗ್ನಿಯು ಯಜ್ಞನಿರ್ವಾಹಕ, ಹವಿರರ್ಪಿಸುವ ಯಜಮಾನನಿಗೆ, ತೇಜೋರೂಪ ಅನ್ನ ಕೊಟ್ಟು, ಧನ ಪುತ್ರಪೌತ್ರರಿಂದ, ತೇಜೋರೂಪನನ್ನಾಗಿ ಮಾಡಲಿ.

**ಸೂಕ್ತ - 25 (ಅಗ್ನೇ ದಿವಃ ಸೂನುರಸಿ......**

ವಿಶ್ವಾಮಿತ್ರ ಋಷಿಗಳು ಅಗ್ನಿ ಮತ್ತು ಇಂದ್ರದೇವತೆಗಳನ್ನು ವಿರಾಟ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಕಲ ವಿಷಯಗಳನ್ನೂ ತಿಳಿದ ನಿಷ್ಕೃಷ್ಟಜ್ಞಾನಿ, ಶಾಶ್ವತಸ್ಥಿತಿಯಿಂದ ಉದಕ ಅಂತರಿಕ್ಷದಲ್ಲಿ ಪ್ರಜ್ವಲಿಸುವವ, ದ್ಯುಲ್ಲೋಕಾಭಿಮಾನಿ ದೇವತೆಯ ಪುತ್ರ. ಪ್ರಾಣಿಗಳ ವಾಸಸ್ಥಾನ ಲೋಕ ಸಂಚರಿಸುತ್ತಾ, ಪಶುಪುತ್ರಾದಿಗಳಿಗೆ ಸಾಮರ್ಥ್ಯ ಕೊಡುವವ. ತೇಜಸ್ಸಿನಿಂದ ಜಗತ್ತನ್ನು ಅಲಂಕರಿಸುವವನೂ ಅಗ್ನಿಯೇ.

ಯಜ್ಞಾರ್ಹದೇವತೆಗಳನ್ನು, ಅಗ್ನಿಯು ಜೊತೆಯಲ್ಲಿ, ಯಜ್ಞಕ್ಕೆ ಕರೆತರಲಿ. ಇಂದ್ರಾಗ್ನಿಗಳು ಅಹಿಂಸಕರಾಗಿ, ಯಜ್ಞದಲ್ಲಿ ಬಂದು ಹವಿಸ್ಸು ಸೋಮಪಾನವನ್ನು, ಸ್ವೀಕರಿಸಲಿ.

ಅಗ್ನಿಯು ಇಂದ್ರಾದಿ ದೇವತೆಗಳನ್ನು ಅವರವರ ಸ್ಥಾನಕ್ಕೆ ಅನುಗುಣವಾಗಿ, ಪ್ರತ್ಯೇಕವಾಗಿ ಪೂಜಿಸಲಿ.

**ಸೂಕ್ತ - 26 (ವೈಶ್ವಾನರಂ ಮನಸಾಗ್ನಿಂ ನಿಚಾಯ್ಯಾ.......**

ಋಷಿಃ – ವಿಶ್ವಾಮಿತ್ರಃ ಆತ್ಮಾ, ದೇವತಾಃ – ವೈಶ್ವಾನರಃ ಮರುತಃ ಅಗ್ನಿರಾತ್ಮಾವಾ ವಿಶ್ವಾಮಿತ್ರೋಪಾಧ್ಯಾಯಃ, ಛಂದಃ – ಜಗತೀ ತ್ರಿಷ್ಟುಪ್.

ವೈಶ್ವಾನರಾಗ್ನಿಯು ಸತ್ಯಪಾಲಕ, ಪ್ರಕಾಶಮಾನ, ವಿಶ್ವನೇತೃ, ಯಜ್ಞಾಭಿಮಾನಿ ಶ್ರೇಷ್ಠ ಫಲದಾತೃ. ಶುದ್ಧಪ್ರಕಾಶಿ, ಮಂತ್ರಪ್ರಕಾಶಿ, ಯಜ್ಞದಲ್ಲಿ ಅತಿಥಿ, ಅಂತರಿಕ್ಷ ಸಂಚಾರಿ. ಶೀಘ್ರಗಾಮಿ ರಥದವ, ಸ್ವರ್ಗಫಲ ತಿಳಿದವ. ಮರಣಧರ್ಮರಹಿತ ದೇವತೆಗಳ ನಡುವೆ, ಅಜ್ಯಾಹುತಿಯಿಂದ ಪ್ರತಿದಿನ ಪ್ರಜ್ವಲಿತ. ಕುಶಿಕ ವಂಶೋತ್ಪನ್ನ ಋಷಿಯು, ಮನಸ್ಸಿನಲ್ಲೇ ಧ್ಯಾನ, ಸ್ತುತಿವಾಕ ಪ್ರಾರ್ಥನೆ, ಹವಿಸ್ಸುಗಳನ್ನು ಅರ್ಪಿಸುತ್ತಾನೆ. ಯಜ್ಞಕ್ಕೆ, ರಕ್ಷಣೆಗೆ, ಪ್ರಾರ್ಥಿಸುತ್ತಾ ಉತ್ತಮ ಅಶ್ವಯುಕ್ತ ಧನಕ್ಕಾಗಿ ಸ್ತುತಿಸುತ್ತಾನೆ.

ಮರುತ್ತುಗಳು ವೃಷ್ಟಿಸ್ವರೂಪರು, ಉದಕದಾತೃಗಳು, ಉಗ್ರಸ್ವರೂಪಿ ರುದ್ರಪುತ್ರರು. ಗಂಭೀರ ಘರ್ಜನೆ ಶಬ್ದ ಮಾಡುವವರು; ವೃಕ್ಷಾದಿಗಳನ್ನು ಚಲಿಸುವಂತೆ ಮಾಡುವವರು. ಉದಕ ಪ್ರದೇಶದಿಂದ, ಉದಕ ಬಿಂದು ಒಟ್ಟುಗೂಡಿಸಿ, ಉದಕ ಸುರಿಸಿ, ಮೇಘವಾಗಿಸಿದಾಗ ಮರುತ್ತುಗಳು ವಿದ್ಯುದ್ರೂಪ ಅಗ್ನಿ ಆಶ್ರಯಿಸಿ, ಪ್ರಕಾಶಿಸಿ, ಮೇಘಚಲಿಸುವಂತೆ ಮಾಡುತ್ತಾರೆ. ಮರುತ್ತುಗಳ ತೇಜೋಯುಕ್ತ ಶಕ್ತಿಗಳನ್ನು, ಯಜ್ಞಕರ್ತರ ಮೊಸ್ತಸಭೆಗಳಲ್ಲಿ, ಉತ್ತಮ ಮಂತ್ರಗಳಿಂದ ಸ್ತುತಿಸುತ್ತಾರೆ. ಕುಶಕ ವಂಶಜರು, ಮರುತ್ತುಗಳಿಗೆ ಪೂಜ್ಯ ಹವಿರರ್ಪಿಸಿ, ಆ ಧನವಂತರಿಂದ ರಕ್ಷಣೆ ಬೇಡುತ್ತಾರೆ.

ಅಗ್ನಿಯು ತನ್ನ ಉತ್ಪನ್ನ ಕ್ರಮವನ್ನು ತಿಳಿದಿದ್ದಾನೆ. ಪ್ರಾಣ, ಆದಿತ್ಯ, ಹವಿಸ್ಸು, – ಈ ಮೂರೂ ವಿಭಾಗಗಳೂ, ಅಗ್ನಿಯೇ ಆಗಿದ್ದಾನೆ. ಅಗ್ನಿಯು ಅಮೃತಮುಖದಲ್ಲಿ ಘೃತವನ್ನು ಕಣ್ಣಾಗಿ ಹೊಂದಿ ಶ್ರವಣ, ಮನನ, ಅಂತಃಕರಣಗಳಿಂದ, ತನ್ನ ತೇಜಸ್ಸನ್ನು ಅರ್ಥಮಾಡಿಕೊಂಡು, ತನ್ನ ಆತ್ಮಸ್ವರೂಪವನ್ನು, ಅಗ್ನಿ ವಾಯು ಸೂರ್ಯತತ್ತ್ವಗಳಿಂದ ರಮಣೀಯವಾಗಿ ಶುದ್ಧಮಾಡಿಕೊಂಡಿದ್ದಾನೆ. ದ್ಯಾವಾಪೃಥ್ವಿಗಳನ್ನು ತನ್ನ 'ವಿಸ್ಮೃತಿ' ಎಂದೂ ತಿಳಿದಿದ್ದಾನೆ.

ಮೇಧಾವಿ ಅತಿಶಯಜ್ಞಾನಿ, ಸತ್ಯಾರ್ಥ ಹೇಳತಕ್ಕವ, ವೇದಾರ್ಥ ಸಮನ್ವಯಕಾರ, ಶಿಷ್ಯಪಾಲಕನಾದ ಋಷಿಯನ್ನು ದ್ಯಾವಾಪೃಥ್ವಿಗಳು ತೃಪ್ತಿಗೊಳಿಸಲಿ.

## ಸೂಕ್ತ - 27 (ಪ್ರ ವೋ ವಾಜಾ ಅಭಿದ್ಯವೋ........

ಋಷಿ ವಿಶ್ವಾಮಿತ್ರರು ಋತು ಹಾಗೂ ಅಗ್ನಿ ದೇವತೆಗಳನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಹವಿಸ್ಸನ್ನು ಸೇವಿಸುವ ಮಾಸ ಪಕ್ಷ ಮತ್ತು ಇತರ ದೇವತೆಗಳು, ಹವಿಸ್ಸನ್ನು ಕೊಡುವ ಪಶುಗಳು, ಯಜ್ಞದ ಅಧಿಪತಿಗಳಾಗಿರುತ್ತಾರೆ.

ಅಗ್ನಿಯು ಯಜ್ಞದಲ್ಲಿ ಆಹವನೀಯಸ್ಥಾನಿಯಾಗಿ, ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಾನೆ. ಸಕಲ ನಿಯಂತೃ ಸಕಲಜಗತ್‌ಪಾಲಕ, ಅಂತರಿಕ್ಷ ಶ್ರೇಷ್ಠಕಾಂತಿಯ ಪ್ರಕಾಶಿಯಾಗಿದ್ದಾನೆ.

ಸರ್ವಭೂತಗಳಿಗೂ ಗರ್ಭರೂಪಿಯಾಗಿ, ಮಥನದಿಂದ ಉತ್ಪನ್ನನಾದ ಅಗ್ನಿಯು, ವೃಷ್ಟಿ ಉದಕ ಸುರಿಸುವವ, ಅಂಧಕಾರ ದೂರ ಮಾಡುವವ.

ದಕ್ಷಪ್ರಜಾಪತಿಯ ಪುತ್ರಿ ಪೃಥ್ವಿಯನ್ನು, ಅಗ್ನಿಯು ಧರಿಸಿದ್ದಾನೆ. ಅಗ್ನಿಯನ್ನು ವೇದೀರೂಪ ಪೃಥ್ವಿಯು, ಕರ್ಮಾರ್ಥ ಧರಿಸಿದ್ದಾಳೆ. ಕರ್ಮ ವಿಷಯಜ್ಞಾನದೊಂದಿಗೆ, ಕರ್ಮ ಪ್ರಾರಂಭದಲ್ಲೇ ಅಗ್ನಿಯು, ಯಜಮಾನಾಭಿ ಮುಖನಾಗುತ್ತಾನೆ. ಶತ್ರುಹನನಕ್ಕಾಗಿ, ದೇವತೆಗಳ ಮುಂಭಾಗದಲ್ಲೇ, ಅಗ್ನಿ ಸ್ಥಾಪಿತನಾಗಿದ್ದಾನೆ. ರಾಕ್ಷಸಾದಿಗಳ ತೊಂದರೆಗೆ ಸಿಕ್ಕಿದ, ಪೂಜ್ಯಋತ್ವಿಕರು, ರಕ್ಷಣೆಗಾಗಿ ಅಗ್ನಿಯನ್ನು ಅಭಿಮುಖ ಮಾಡಿಕೊಳ್ಳುತ್ತಾರೆ.

ಸುಖಾಪೇಕ್ಷಿಯಾದ ಯಜಮಾನರು, ಕರ್ಮಸಿದ್ಧಿಯು, ಯಜ್ಞಪ್ರಯೋಗಾರ್ಥ, ಯಜ್ಞಫಲಾರ್ಥ, ಹವಿಸ್ಸಿಂದ, ಸ್ತುತಿವಾಕ್ ಆಜ್ಯ ಆಹುತಿಗಳಿಂದ, ಅಗ್ನಿಯನ್ನು ಪ್ರಜ್ವಲಿಸಿ, ಪ್ರಬಲಗೊಳಿಸಿ ಪೂಜಿಸುತ್ತಾರೆ.

ಯಜ್ಞಮುಗಿಯುವವರೆಗೆ, ಪ್ರಕಾಶಮಾನ ಅಗ್ನಿಯನ್ನು ಇರಿಸಿಕೊಳ್ಳಲು, ಶಕ್ತಿಯುತ-ನಾಗಿರುವಂತೆ ಮತ್ತು ಯಜಮಾನನ ಪಾಪ ದಾಟಿಸುವಂತೆ, ಯಜಮಾನನು ಅಗ್ನಿಯನ್ನು ಪ್ರಾರ್ಥಿಸುತ್ತಾನೆ.

**ಸೂಕ್ತ - 28 (ಅಗ್ನೇ ಜುಷಸ್ವ ನೋ ಹವಿಃ......**

ಋಷಿ ವಿಶ್ವಾಮಿತ್ರರು, ಅಗ್ನಿದೇವನನ್ನು, ಗಾಯತ್ರೀ ಉಷ್ಣಿಕ್ ತ್ರಿಷ್ಟುಪ್ ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಪುರೋಡಾಶಗಳನ್ನು ಇಚ್ಛಿಸುವ ಆಹವನೀಯ ಸ್ಥಾನದಲ್ಲಿರುವ ಅಗ್ನಿಯು, ಆಹುತಿಗಳಿಂದ ಪ್ರವೃದ್ಧನಾಗುವನು. ಕರ್ಮರೂಪ ಫಲದಾತ ಅಗ್ನಿಗೆ, ಕಲ್ಪಿತ ಹವಿಸ್ಸನ್ನು ಅಧ್ವರ್ಯುಗಳು ನ್ಯೂನಮಾಡದೇ, ಅರ್ಪಿಸುತ್ತಾರೆ. ಅಗ್ನಿಯು ಮೂರು ಸವನಗಳಲ್ಲಿ, ಪಕ್ವವಾದ ಅಲಂಕೃತವಾದ ಪುರೋಡಾಶಗಳನ್ನು ಸ್ವೀಕರಿಸಲಿ.

ಅಗ್ನಿಯು ನಾಶರಹಿತ, ಸ್ವರ್ಗಾದಿಫಲದಾತ, ಸ್ವಪ್ನನಿವಾರಕ, ಪ್ರಬೋಧಕಾರಿ ಸೋಮವನ್ನು ಇಂದ್ರಾದಿಗಳಲ್ಲಿ ಸ್ಥಾಪಿಸಲಿ.

**ಸೂಕ್ತ - 29 ( ಅಸ್ತೀದಮಧಿಮಂಥನಮಸ್ತಿ ಪ್ರಜನನಂ......**

ಋಷಿ ವಿಶ್ವಾಮಿತ್ರರು ಅಗ್ನಿ ಹಾಗೂ ಋತ್ವಿಜ ದೇವತೆಗಳನ್ನು ಅನುಷ್ಟುಪ್, ತ್ರಿಷ್ಟುಪ್, ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಉತ್ತಮ ಕರ್ಮಫಲದಾತ, ಉತ್ತಮ ಸುಖಯುಕ್ತ, ಕಾಷ್ಠಾದಿಗಳಲ್ಲಿ ಪ್ರಜ್ವಲಿತ. ಸಕಲಗಮನ ಪ್ರಭಾವಿ, ಯಜ್ಞಕರ್ತರಿಂದ ಸ್ತುತಿತ. ಹವಿಸ್ಸಿನಿಂದ ದೇವತೆಗಳನ್ನು ರಕ್ಷಿಸುವವ. ಮನೋನುವಾಕ್ ಕರ್ಮದಿಂದ ಐಕ್ಯಸಂಪಾದಿಸುವ ಆರೋಚಮಾನ ರೂಪಿ. ಜ್ಯೋತಿಷ್ಟೋಮ ಯಜ್ಞಪ್ರಜ್ಞಾಪಕ. ಉತ್ತರವೇದಿಯಲ್ಲಿ ಹೋಮಾರ್ಥ ಕುಳಿತುಕೊಳ್ಳುವವ, ಪಾಪಗಳಿಂದ ದಾಟಿಸುವವ.

ಕುಶಿಕರು ಬ್ರಹ್ಮನಿಂದ ಪ್ರಥಮೋತ್ಪನ್ನರು. ಕರ್ಮವಿರೋಧಿಗಳೊಂದಿಗೆ ಯುದ್ಧ ಮಾಡುವವರು, ಸ್ಥಾವರಜಂಗಮಗಳನ್ನೆಲ್ಲಾ ತಿಳಿದವರು, ಅಗ್ನಿಗೆ ಹವಿರರ್ಪಿಸಿ ಉಪಚರಿಸುವವರು, ಅವರವರ ಗೃಹದಲ್ಲಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ.

ಅಗ್ನಿಯನ್ನು ಹಿಂದೆ ಋಷಿಗಳು ಮಥನಮಾಡಿ ಉತ್ಪನ್ನಮಾಡಿರುವಂತೆ, ಈಗಲೂ ಮಾಡಲು ಕಶ, ಯೂಪ, ಸಾಧನರಜ್ಜು, ದರ್ಭೆಯಕೂರ್ಚ ಎಲ್ಲಾ ಸಿದ್ಧವಾಗಿದೆ.

ಸಪ್ತಸಂಖ್ಯಾತ ಹೋತೃಗಳು, ಸನಾತನ ಅಗ್ನಿಯನ್ನು ಹತ್ತು ಬೆರಳುಗಳಿಂದ, ಮಥನದಿಂದ ಉತ್ಪನ್ನ ಮಾಡಿದರು. ಅಗ್ನಿಯ ಉತ್ಪನ್ನವನ್ನು ಪುತ್ರೋತ್ಸವದಂತೆ ಆಚರಿಸಿದರು.

ಅರಣಿಯಲ್ಲಿ, ಗರ್ಭಸ್ಥಶಿಶುವಿನಂತೆ, ರಕ್ಷಕನಾದ ಅಗ್ನಿಯು, ಒಂದರಮೇಲೊಂದು ಅರಣಿ ಸೇರಿದಾಗ, ತಮೋನಾಶಕ ತೇಜೋಯುಕ್ತನಾಗಿ, ಅರಣೀರೂಪ ಯೋನಿಯಲ್ಲಿ, ಅಗ್ನಿ

'ನರಾಶಂಸ' ಎಂದೂ, ಅಂತರಿಕ್ಷದಲ್ಲಿ ಪ್ರಜ್ವಲಿತನಾದಾಗ 'ಮಾರಿತಾಶ್ವ'ನೆಂದೂ, ಪ್ರಸಿದ್ಧನಾಗಿದ್ದಾನೆ. ಅಗ್ನಿಯ ಸಂಚಾರಕಾಲದಲ್ಲಿ ವಾಯು ಉತ್ಪನ್ನವಾಯಿತು.

ದೇವತಾ ಸಹಾಯ ಅಪೇಕ್ಷಿಸುವ ಯಜಮಾನನು, ನೆರವೇರಿಸುವ ಕ್ರಿಯೆಯಲ್ಲಿ, ಅಗ್ನಿಯು, ಯಜ್ಞಾರ್ಥ ನಿದ್ರಿಸದೆ, ಎಚ್ಚರವಾಗಿಯೇ ಇರುತ್ತಾನೆ.

ಅಗ್ನಿಯು, ಶಿಲಾ ತೃಣಗಳನ್ನೆಲ್ಲಾ ದಹಿಸುತ್ತಾ, ಆ ಪ್ರದೇಶದಿಂದ ಮುಂದಕ್ಕೆ ಸಂಚರಿಸುತ್ತಾನೆ. ಅಗ್ನಿಯಿಂದ ಯಜಮಾನನು, ಯುದ್ಧದಲ್ಲಿ ಶತ್ರುವನ್ನು, ಜಯಿಸುವ ಸಾಮರ್ಥ್ಯಪಡೆಯುತ್ತಾನೆ. ಯಜ್ಞದಲ್ಲಿ, ಭೂಮಧ್ಯಪ್ರದೇಶ ಉತ್ತರ ವೇದಿಕೆಯಲ್ಲಿ, ಹವಿಸ್ಸನ್ನುವಹಿಸಲು ಭಕ್ತಿಯಿಂದ ಅಗ್ನಿ ಸ್ಥಾಪಿತನಾಗಿದ್ದಾನೆ.

ವಸಂತ ಋತುವಿನಲ್ಲಿ, ಅರಣಿಯಲ್ಲಿ ಉತ್ಪನ್ನನಾಗಿ, ಅಗ್ನಿಯು, ಯಾಗಕರ್ತನಿಂದ ಹವಿಸ್ಸು ಪುರೋಡಾಶಗಳನ್ನು ಸ್ವೀಕರಿಸಲಿ. ಯಜ್ಞ ಉದ್ದೇಶಿಸಿ, ಸೋಮ ಅಭಿಲಕ್ಷಿಸಿ, ಅಗ್ನಿಯು ಯಜ್ಞಕ್ಕೆ ದಯಮಾಡಲಿ. ಯಜಮಾನನ ಸ್ತುತಿವಾಕ್ಯನ್ನು ಅಗ್ನಿಯು ವೃದ್ಧಿಪಡಿಸಲಿ. ಅಗ್ನಿಯ ಸಹಾಯ ಅಪೇಕ್ಷಿಸುವವರು, ಅರ್ಪಿಸುವ ಹವಿಸ್ಸನ್ನು ಇಂದ್ರಾದಿಗಳಿಗೆ ಅರ್ಪಿಸಿ ಪೂಜಿಸಿ ತೃಪ್ತಿಪಡಲಿ. ಅನ್ನ ಸ್ಥಾಪಿಸಲಿ.

## (ಅಷ್ಟಕ - 3, ಅಧ್ಯಾಯ - 2, ಸೂಕ್ತಗಳು 30–39.)

### ಸೂಕ್ತ - 30 (ಇಚ್ಛಂತಿ ತ್ವಾ ಸೋಮ್ಯಾಸಃ......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕುಶಿಕವಂಶಿಗಳು, ಮನನೀಯಮಂತ್ರದಿಂದ ಸ್ತುತಿಸುವವರು, ಸ್ವರ್ಗಕಾಮಿಗಳು, ಕರ್ಮಕುಶಲಿಗಳು, ಇಂದ್ರಪ್ರಭಾವದಿಂದ ವರ್ಣಾತ್ಮಕ ಉಷಃತೇಜಸ್ಸನ್ನು ಮಾಡಲಿಚ್ಛಿಸುತ್ತಾ ಹೋತೃಕರ್ಮ ಮಾಡಲು ತಿಳಿಯುತ್ತಾರೆ.

ದೇವತೆಗಳು, ಅಭಯದಾಯಕ ಇಂದ್ರನಿಗಾಗಿ, ಆಹವನೀಯಾಗ್ನಿಯನ್ನು ಋತ್ವಿಜರು ಪ್ರಜ್ವಲಿತ ಮಾಡುತ್ತಾರೆ. ಮಿತ್ರಭೂತ ಋತ್ವಿಜರು, ಸೋಮರಸ ಹವಿರೂಪ ಅನ್ನ ಹೊಂದಿದ್ದಾರೆ.

ಇಂದ್ರನು ಸಂಚರಿಸುವ ಮಾರ್ಗಗಳನ್ನು, ಸಮರ್ಥರಥಯುಕ್ತ ಇಂದ್ರನ ಕುದುರೆಗಳು ಆಕ್ರಮಿಸುತ್ತವೆ. ಉತ್ತಮ ಮಾರ್ಗದರ್ಶಿ ಇಂದ್ರನು, ಅಂತರಿಕ್ಷ ದ್ಯುಲ್ಲೋಕಗಳು, ಕೆಳಗೆ ಬೀಳದಂತೆ ತಡೆಹಿಡಿದಿದ್ದಾನೆ.

ಪ್ರಸಿದ್ಧ ಮಹಿಮೆಯ ಇಂದ್ರನನ್ನು, ಹಳದಿ ಬಣ್ಣದ ಕುದುರೆಗಳು, ದೂರ ಲೋಕದಿಂದ ಹತ್ತಿರ ತರುತ್ತವೆ. ಮಹತ್ವಾಕಾಂಕ್ಷಿ ನದಿಗಳು ಇಂದ್ರನಲ್ಲೇ ಸ್ಥಾಪಿತವಾಗಿವೆ. ತನ್ನಲ್ಲೇ ಶೇಖರಿತ ದಧಿಕ್ಷೀರಗಳನ್ನು ಇಂದ್ರನು, ಗೋವುಗಳಲ್ಲಿ ಶೇಖರಿಸಿದ್ದಾನೆ. ಆದ್ದರಿಂದಲೇ, ಕರುಹಾಕಿದ ಧೇನುಗಳು ಕ್ಷೀರವನ್ನು ಧರಿಸುತ್ತದೆ.

ದ್ಯಾವಾಪೃಥ್ವಿಗಳನ್ನು ಒಟ್ಟಿಗೆ ತಂದವನು ಇಂದ್ರನೇ. ದ್ಯಾವಾಪೃಥ್ವಿಗಳನ್ನೂ, ಪರ್ವತಗಳನ್ನೂ ನಿಶ್ಚಲಗೊಳಿಸಿ, ಭೂಮಿಯು ಒಂದೇ ಸಮಸ್ಥಿತಿಯಲ್ಲಿ ಒಂದೇ ವೃತ್ತದಲ್ಲಿ ಚಲಿಸುವಂತೆಯೂ ಇಂದ್ರನು ಮಾಡಿದ್ದಾನೆ.

ಇಂದ್ರನು ಆಪತ್ತಿನಿಂದ ಪಾರಿಸುವವ, ಪ್ರತಿಬಂಧಕ ಅಸುರ ಮಾರ್ಗದಲ್ಲಿ ಇರುವವ, ಪಾಪಾತ್ಮರನ್ನು ಹಿಂಸಿಸುವವ, ಕರ್ಮವಿಘ್ನ ಶತ್ರುಗಳನ್ನು ಹಿಂಸಿಸಿ ವಜ್ರಾಯುಧದಿಂದ ಮೂಲ-ಮಧ್ಯ-ಅಗ್ರದಲ್ಲೇ ಕತ್ತರಿಸಿ ನಾಶಮಾಡುತ್ತಾನೆ. ಅಸುರರ ನೆಲೆ ಉರುಳಿಸಿ, ವೀರ್ಯ ಪ್ರಕಟಿಸುವವ. ಮರುತ್ತುಗಳೊಡನೆ ವೀರಕಾರ್ಯ ನಡೆಸುವವ.

ವಜ್ರಾಯುಧಕ್ಕೆ ಹೆದರಿದ ಮೇಘ ಸೀಳಿ, ಉದಕಹರಿಸಿ, ಶ್ರೇಷ್ಠಮಾರ್ಗದಲ್ಲಿ ಆಕರ್ಷಕ ಅಪೇಕ್ಷಿತ ಉದಕಹರಿಸುತ್ತಾನೆ. ಬೆಳೆಯುತ್ತಿರುವ, ತೊಂದರೆ ಉಂಟುಮಾಡುವ ವೃತ್ರಾಸುರನನ್ನು ನಾಶಮಾಡಿ, ವೃತ್ರ ಮಾತೆಯೊಂದಿಗೆ ಇರುವವರನ್ನು ಹಸ್ತಹೀನರನ್ನಾಗಿ ಮಾಡಲಿ.

ಇಂದ್ರನ ರಥವು ಶತ್ರುವಿನ ಅಭಿಮುಖ ಬಂದು, ಪ್ರತಿಭಟಿಸುವ ಅಸುರರನ್ನು, ಸ್ವೇಚ್ಛೆಯ ಅಸುರರನ್ನು, ಅಟ್ಟಿಸಿಕೊಂಡು ಬರುವವರನ್ನು, ಬ್ರಾಹ್ಮಣ ದ್ವೇಷಿ ಅಸುರರನ್ನು ವಜ್ರಾಯುಧದಿಂದ ಕೆಳಕ್ಕೆತಳ್ಳಿ ನಾಶಮಾಡಲಿ. ಯಜ್ಞಪೂರ್ತಿಯಾಗುವಂತೆ ಮಾಡಲಿ.

ಯಜ್ಞಕ್ಕೆ ಇಂದ್ರನು ಬರಲಿ. ಅನ್ನಾರ್ಥಯುದ್ಧದಲ್ಲಿ, ರಕ್ಷಣಾರ್ಥ ಪ್ರಾರ್ಥಿಸುವ ಯಜಮಾನನ ಸೌಕರ್ಯಾರ್ಥ, ಸಹಾಯಕ್ಕಾಗಿ, ಕ್ಷೇಮಕ್ಕಾಗಿ, ಅನೇಕರಿಂದ ಅಪೇಕ್ಷಿತ ಐಶ್ವರ್ಯಯುಕ್ತ ಇಂದ್ರನು, ಉದಕ ಸುರಿಸಲಿ. ಪೂಜ್ಯ ಅನ್ನ, ಗೋವು, ಅಶ್ವ, ಧನ ಇಷ್ಟಾರ್ಥಗಳಿಂದ ತೃಪ್ತಿಗೊಳಿಸಲು, ಅನಂತ ಐಶ್ವರ್ಯ, ವೀರ್ಯ, ಸಂಪತ್ತು ಕೊಡಲಿ. ಹವಿಸ್ಸಿನಿಂದ ಉಂಟಾದ ಶ್ರೇಷ್ಠ ಶುದ್ಧ ಕಲ್ಯಾಣಕರ ಅಪರಿಮಿತ ಐಶ್ವರ್ಯ, ದಾನಮಾಡಲಿ. ಸತ್ಯಾತ್ಮಕ ಕರ್ಮಫಲ ಪ್ರದವಾದದ್ದನ್ನು, ಮಾಡಲಿ.

ಉದಕವು, ಇಂದ್ರಪ್ರೇರಿತವಾಗಿ ಭೂಮಿಯಲ್ಲಿ ಯಜಮಾನ ಸೌಕರ್ಯಾರ್ಥ, ಪ್ರವಹಿಸಲಿ. ಹಿಂಸಕ ಶತ್ರುನಾಶಮಾಡಿ, ಯಜಮಾನ ಮತ್ತು ಅವನ ಮಹತ್‌ಸ್ಥಿತಿಯ ಪುತ್ರರಿಗೆ ಅಪೇಕ್ಷಿತ ಫಲ, ಕಾಂತಿಯುತ ಧನ ಕೊಟ್ಟು, ಯಜ್ಞನಿರ್ವಹಿಸಲಿ. ಧನದಾನದಿಂದ ಅಭಿಲಾಷೆಯನ್ನು ಇಂದ್ರನು ತೃಪ್ತಿಗೊಳಿಸಲಿ.

## ಸೂಕ್ತ - 31 (ಶಾಸದ್ವಹ್ನಿರ್ದುಹಿತುರ್ನಪ್ತ್ಯಂ ಗಾದ್ವಿದ್ವಾ........

ವಿಶ್ವಾಮಿತ್ರ ಕುಶಿಕಋಷಿಗಳು, ಇಂದ್ರದೇವನನ್ನು, ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಲಂಕಾರ ಸತ್ಕಾರಗಳೊಂದಿಗೆ, ಮಾವನು ಅಳಿಯನಿಗೆ ತನ್ನ ಮಗಳನ್ನು ಒಪ್ಪಿಸುತ್ತಾನೆ. ಅಳಿಯ ಮಗಳು ಸುಖವಾಗಿರುತ್ತಾರೆ, ಮೊಮ್ಮಕ್ಕಳಿಗೆ ಪಿತೃರೂಪದಲ್ಲಿರುತ್ತಾ, ಸಹೋದರರಿಗಾಗಿ ಪಿತ್ರಾರ್ಜಿತ ಧನಕೊಡದೆ, ಮಗಳಲ್ಲಿ ಔರಸ ಪುತ್ರರನ್ನು ಪಡೆಯುತ್ತಾರೆ. ಮೊಮ್ಮಗನು ಪಿಂಡಪ್ರದಾನ ಕರ್ತನಾದರೆ, ಮೊಮ್ಮಗಳು ವಸ್ತ್ರಾಲಂಕಾರಗಳಿಗೆ ಪಾತ್ರಳಾಗುತ್ತಾಳೆ.

ಇಂದ್ರನು ಅಸುರನಾಶಕ, ಉತ್ಪನ್ನವಾದ ಸಕಲವನ್ನೂ ತಿಳಿದವ, ಯುದ್ಧದಲ್ಲಿ ಮುನ್ನುಗ್ಗುವವ, ಸಮಸ್ತಕ್ಕೂ ಮಾದರಿ ಆದವ, ಅಂತರಿಕ್ಷದಲ್ಲಿ ಪೃಥ್ವಿಯನ್ನು ಎತ್ತಿಹಿಡಿದವ, ಅನೇಕ ಅಶ್ವಗಳನ್ನು ಹೊಂದಿರುವವ, ನೇತೃಗಳಾದ ಮರುತ್ತುಗಳೊಡಗೂಡಿ, ಆದಿತ್ಯ ಪೃಥ್ವಿ ಉಷಸ್ಸು ಅಗ್ನಿಯನ್ನು ಉಂಟುಮಾಡಿದವ.

ಸಾಮರ್ಥ್ಯದಿಂದ ಅಹೋರಾತ್ರಿಗಳು, ಆವೃತ್ತ ಪರಿಭ್ರಮಿಸುವಂತೆ ಮಾಡಿದವ ಇಂದ್ರನೇ.

ಅಸುರ ಹನನದಿಂದ ಸೃಷ್ಟಿಗೊಂಡ ಉದಕವು, ಅಗ್ನಿವಾಯು ಸೂರ್ಯ ಸೋಮರಿಂದ ಶುದ್ಧಗೊಂಡು, ಲೋಕೋಪಕಾರಾರ್ಥ, ಹಗಲೂ ರಾತ್ರಿ ಆಹ್ಲಾದದಿಂದ ಪ್ರವಹಿಸುತ್ತದೆ.

ಓಷಧಿರೂಪದಿಂದ, ಸೋಮಾದ್ಯಾಹುತಿಗಳಿಂದ, ಮಹತ್ತ್ವ ಪಡೆದ ಅಗ್ನಿಯ ಜ್ವಾಲೆಯ ರಶ್ಮಿಗಳು, ಪ್ರಸರಣ ಶಕ್ತಿಯಿಂದ, ಇಂದ್ರನಿಗಾಗಿಯೇ ಉತ್ಪನ್ನವಾಗಿವೆ. ವೃತ್ರನ ಶರೀರದಿಂದ ಹೊರಟ ತೇಜಸ್ಸು, ಉಷಃ ಸೂರ್ಯ ತೇಜಸ್ಸುಗಳೊಂದಿಗೆ ಸೇರಿದವು.

ಅಂಗೀರಸರು, ಪರ್ವತದಲ್ಲಿ ಗೋವುಗಳಿರುವುದನ್ನು ದೃಢಪಡಿಸಿಕೊಂಡು, ಮನನೀಯ ಸ್ತುತಿಯಿಂದ ಇಂದ್ರನನ್ನು ಅರ್ಚಿಸಿದಾಗ, ಇಂದ್ರನು ದೇವಶುನಿಗೆ ಅನ್ನ ಒದಗಿಸಿ, ಗೋವುಗಳನ್ನು ಹುಡುಕಲು ಕಳಿಸಿದನು. ಗೋವುಗಳನ್ನು ಶಬ್ದದಿಂದ ತಿಳಿದು, ಗೋವುಗಳ ಮುಂದೆ ಬಂದು ನಿಂತಿತು. ಇಂದ್ರನು ಗೋವುಗಳಿದ್ದ ಗುಹೆ ಪ್ರವೇಶಿಸಿದನು. ಪರ್ವತರಾಜನು, ಇಂದ್ರನ ಸ್ನೇಹ ಇಚ್ಛಿಸಿ, ಗೋವುಗಳನ್ನು ಯಜ್ಞಾರ್ಥ ಬಿಡಿಸಿಕೊಟ್ಟನು. ಇಂದ್ರನು ಅಂಗೀರಸ್ಸುಗಳಿಗೆ ಗೋವುಗಳನ್ನು ವಹಿಸಿದಾಗ, ದ್ಯಾವಾಪೃಥ್ವಿಗಳನ್ನು ಹರ್ಷ ವ್ಯಾಪಿಸಿತು. ಇಂದ್ರನನ್ನು ಅಂಗೀರಸ್ಸುಗಳು ಪೂಜಿಸಿ ಉನ್ನತಸ್ಥಾನದಲ್ಲಿ ಪ್ರಕಾಶಪಡಿಸಿದರು. ಕರ್ಮನಿರತ ಗೋರಕ್ಷಕರನ್ನು ನೇಮಿಸಿದರು. ಆದ್ದರಿಂದಲೇ, ಗೋವುಗಳು, ಯಜ್ಞಾರ್ಥ ಮಧುರ ಹವಿಸ್ಸಿನ ಕ್ಷೀರವನ್ನು ಕೊಡುತ್ತವೆ.

ವಿಶ್ವಾಮಿತ್ರ ಋಷಿ, ಅಂಗೀರಸ್ಸುಗಳಂತೆ, ಸ್ತೋತ್ರದಿಂದ ಇಂದ್ರನನ್ನು ಪೂಜಿಸುತ್ತಾರೆ. ಕತ್ತಲು ಲೋಕದ ದ್ರೋಹಿ ರಾಕ್ಷಸರನ್ನು ನಾಶಮಾಡಿ, ಆ ಸಂಬಂಧಿ ಧನಗಳನ್ನು ಅನುಭವಿಸುವಂತೆ ಕೊಡಲು ಪ್ರಾರ್ಥಿಸುತ್ತಾನೆ.

ಲೋಕದಲ್ಲಿ ಶಾಶ್ವತವಾಗಿ ಹರಿಯಲು ಉದಕಗಳ ಮೂಲವನ್ನು ಇಂದ್ರನು ಉದಕದಿಂದ ತುಂಬಲಿ. ದ್ಯಾವಾಪೃಥ್ವಿಗಳಲ್ಲಿ ಸೂರ್ಯರೂಪದಲ್ಲಿ ಇಂದ್ರನು ಸೇರಿ ಸ್ವಾಭಾವಿಕ ಶಕ್ತಿ ಸಿದ್ಧಿಸಲಿ.

ಅನ್ನಲಾಭಾರ್ಥ ಸಂಗ್ರಾಮದಲ್ಲಿ ರಕ್ಷಣಾರ್ಥ ಇರಲು, ಶಕ್ತಿ ಕೊಡಲಿ –ಎಂದು ಇಂದ್ರನಲ್ಲಿ ಯಜಮಾನನ ಪ್ರಾರ್ಥನೆ.

ಇಂದ್ರನು, ಮಹತ್ತಾದ ಸ್ತೋತ್ರ ಹವಿಸ್ಸು ಸ್ವೀಕರಿಸಿ, ಶ್ರೇಷ್ಠ ಪಾಲಕನಾಗಿರಲಿ. ಯಜಮಾನನಿಗೆ ಹಿರಣ್ಯ ಗವಾದಿಗಳನ್ನು ಕೊಡಲಿ. ಸಖಿರೊಂದಿಗೆ ರಕ್ಷಣೆಗಳೊಂದಿಗೆ ಯಜಮಾನಾಭಿಮುಖಿನಾಗಲಿ. ವೃತ್ರವಧಾ ದೋಷದಿಂದ ಪೂರ್ಣ ಮುಕ್ತನಾಗಲಿ.

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳ

ಇಂದ್ರನು ಜಗತ್ತಿಗೇ ಉತ್ತಮ ಮಾರ್ಗದರ್ಶಿ. ಅನೇಕರಿಂದ ಅಪೇಕ್ಷಿತ. ಅಶ್ವದವ. ಹವಿಸ್ಸಿಂದ ಪ್ರವರ್ಧಮಾನ. ದ್ರೋಹವೆಸಗದವ. ಇಂದ್ರನು ದ್ಯುಲ್ಲೋಕ ಸೂರ್ಯ ಉಷಸ್ಸುಗಳ ಸೃಷ್ಟಿಕರ್ತ. ದ್ಯಾವಾಪೃಥ್ವಿಗಳಲ್ಲಿಯೇ ಇಂದ್ರನು ಅವು ಇಂದ್ರನ ವೈಭವವನ್ನು ಅಳೆಯಲಾಗಲಿಲ್ಲ, ಅಳೆಯಲು ಸಾಧ್ಯವೂ ಇಲ್ಲ

ಇಂದ್ರನಿರ್ಮಿತ ಪೃಥಿವ್ಯಾದಿಗಳನ್ನೂ, ಯಜ್ಞಕರ್ತರನ್ನೂ, ದೇವತೆಗಳು ಇಂದ್ರನ ಅನೇಕ ಕಾಂತಿಗಳ ಪೈಕಿ, ಒಂದು ಮಾತ್ರ ಪೃಥ್ವಿಯನ್ನು ಆವರಿಸಿದೆ ಗುಹೆಯನ್ನು ಕಾಳ್ಗಿಚ್ಚು ಆವರಿಸಿದೆ.

ಇಂದ್ರನ ಸಾಮರ್ಥ್ಯವನ್ನು, ದ್ಯುಲ್ಲೋಕ ಅಹಸ್ಸು ಮಾಸ ಸಂವ ತಡೆಯಲಾರವು. ಅವನ ಪ್ರಸರಣವನ್ನು ಅತೀ ಆಳದ ಸಮುದ್ರವಾಗಲೀ, ಪರ್ವತಗಳಾಗಲೀ, ತಡೆಯಲಾರವು.

ಆಕರ್ಷಕ ವಾಕ್ಯಗಳಿಂದ ಹರಿದುಂಬಿಸಲ್ಪಡುವ, ಉತ್ಪನ್ನವಾದೊಡನೆಯೇ ಮಾಡಿದ, ಇಂದ್ರನ ಸುತ್ತಲೂ, ಸೋಮರಸವು ದ್ರೋಣ ಕಳಶದಿಂದ ಸುರಿ

ಮರುತ್ತುಗಳು ಶಕ್ತಿರೂಪಿಗಳಾಗಿದ್ದು, ತೇಜೋವಂತ ಶತ್ರುನಾಶಕ, ಶಕ್ತಿವ ಸಮರ್ಥಿಗಳೂ ಆಗಿದ್ದಾರೆ. ವೃತ್ರನ ಮರ್ಮಸ್ಥಾನ ರಹಸ್ಯ ತಿಳಿದು ಇಂದ್ರ ಮಾಡಿದವು. ಇಂದ್ರನು ವೃತ್ರನನ್ನು ನಾಶಮಾಡಿ, ವೇಗಪ್ರವಾಹಿ ಉದಕ ಅಂತರಿಕ್ಷ ಉದಕದೊಡನೆ ಪಾರ್ಥಿವ ಉದಕ ಸೇರಿ ಪ್ರವಹಿಸುವಂತೆ ಮಾಡಿ

ಯಜಮಾನನಿಗೆ ಸ್ತುತಿಸುವ ಮನಸ್ಸಾದಾಗ, ಅವನಿಗೆ ವಿಚಿತ್ರಕಾರಿ ದಿನ ಭಾಸವಾದಾಗ, ಅವನು ಇಂದ್ರನನ್ನು ಪುರಾತನ ಹಾಗೂ ನವನಿರ್ಮಿತ ನೂತ ಸ್ತುತಿಸುತ್ತಾನೆ. ಸುರಕ್ಷಿತ ಯಜ್ಞದಲ್ಲಿ ಎಲ್ಲರೂ ಇಂದ್ರನನ್ನು ಅಭಿಮುಖ ಮಾ

ಇಂದ್ರನು, ಹರಿತ ವರ್ಣದ ಅಶ್ವ ರಥಾರೂಢನಾಗಿ, ಮರುತ್ತುಗಳು ಹ ರುದ್ರರೊಡಗೂಡಿ, ಯಜ್ಞ ಸೇವಿಸಲಿ. ಸವನತ್ರಯಗಳಲ್ಲೂ ಗವಾಶಿರಗಳಿಂದ, ಶ ರಮಣೀಯ ಸೋಮವನ್ನು, ಈ ಓಂದೆ ಮನು ಯಜ್ಞದಲ್ಲಿ ಸೇವಿಸಿದ ಸೇವಿಸಲಿ; ತೃಪ್ತಿಗೊಳ್ಳಲಿ. ಇಂದ್ರನು ಯಜಮಾನನನ್ನು ರಕ್ಷಿಸಿ, ಅಸುರ ನಾಶವ ಆಹಾರ ಧನಾದಿಗಳಿಂದ ಹರ್ಷತರಲಿ.

**ಸೂಕ್ತ - 33 (ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇ....**

ಋಷಿ :- ವಿಶ್ವಾಮಿತ್ರಃ, ನದ್ಯಃ. ದೇವತಾಃ- ನದ್ಯಃ, ವಿಶ್ವಾ

ಛಂದಃ :- ತ್ರಿಷ್ಟುಪ್, ಅನುಷ್ಟುಪ್.

ವಿಪಾಟ ಮತ್ತು ಶತದ್ರಿನದಿಗಳು ಒಬ್ಬರಿಗೊಬ್ಬರು ಸೇರಿಕೊಂಡು ಪರ್ವ ಪ್ರವಹಿಸಿ, ಸುತ್ತಲಿನ ಪ್ರದೇಶ ತಂಪುಗೊಳಿಸುತ್ತಾ, ಸಮುದ್ರ ಸೇರಲಿಚ್ಛಿಸಿ,

ನಿಲ್ಲದ ವೇಗಪ್ರವಾಹದಿಂದ ಹರಿಯುತ್ತಿವೆ. ಇಂದ್ರನು ತನ್ನ ಆಜ್ಞೆಯಿಂದ ಪ್ರವಹಿಸುವಂತೆ ಮಾಡುತ್ತಾನೆ.

ಇತರ ರಾಕ್ಷಸರನ್ನೂ ಸಂಹರಿಸಿದ ನಂತರ, ವಜ್ರಾಯುಧದಿಂದ ಮೇಘರೂಪಿ ಅಸುರನನ್ನು ಕೊಂದು, ಇಂದ್ರನು ಉದಕ ಬಿಡುಗಡೆ ಮಾಡಿದನು. ಬಿಡುಗಡೆ ಆದ ಉದಕವನ್ನು ಪ್ರವಾಹವಾಗಿ, ಗಮ್ಯಪ್ರದೇಶ ಕುರಿತು ಪ್ರವಹಿಸುವಂತೆ, ಮಾಡಿದನು.

ಶ್ರೇಷ್ಠಳಾದ ಪೋಷಕ ಮಾತೆ ಶತದ್ರಿ, ಮಹತ್ ಸ್ವರೂಪಿಣಿ ಸೌಭಾಗ್ಯವತಿ ವಿಪಾಟ ಇವರುಗಳು ಉದಕಲೋಕಕ್ಕೆ ಸಂತೃಪ್ತಿ ಉಂಟುಮಾಡುತ್ತಾ ಸಮುದ್ರಾಭಿಗಮನೆಯರಾಗಿದ್ದಾರೆ.

ದೂರ ಪ್ರದೇಶದಿಂದ, ಸೋಮ ಹರಣಾರ್ಥವಾಗಿ ಹೊರಟ ವಿಶ್ವಾಮಿತ್ರರು, ಆತ್ಮ ರಕ್ಷಣಾರ್ಥವಾಗಿ ಕೊಂಚಕಾಲ ನದೀಪ್ರವಾಹಗಳನ್ನು ತಡೆಯಲು ನದೀದೇವತೆಗಳನ್ನು ಪ್ರಾರ್ಥಿಸುತ್ತಾರೆ. ಸುಲಭವಾಗಿ ದಾಟಲು ಅನುಕೂಲವಾಗುವಂತೆ, ರಥದ ಇರಚೆಗಳ ಕೆಳಗೆ ನದಿಪ್ರವಹಿಸುವಂತೆ ಪ್ರಾರ್ಥಿಸುತ್ತಾರೆ.

ಸೋದರೀಪ್ರಾಯ ನದಿಗಳು, ವಿಶ್ವಾಮಿತ್ರರ ಸ್ತುತಿವಾಕ್ಯುಗಳನ್ನು ಕೇಳಿ ಯಜ್ಞಕಾಲದಲ್ಲಿ, ಪ್ರಾರ್ಥನೆ ಸಲ್ಲಿಸುವ, ಪುರುಷರ ನಡುವೆ, ಕಠಿಣಮಾತುಗಳಿಗೆ ಎಡೆಯಾಗದಿರುವಂತೆ ವಿನಂತಿಸಿ, ಮಗುವಿನ ಸ್ತನ್ಯಪಾನಕ್ಕೆ ತಾಯಿ ಬಗ್ಗುವಂತೆ, ಪ್ರವಾಹವನ್ನು ತಗ್ಗಿಸಿದರು.

ವಿಶ್ವಾಮಿತ್ರರು ನದಿದಾಟಿದನಂತರ, ಅನುಗ್ರಹದಿಂದ ನದಿಗಳು, ಶ್ರೇಷ್ಠ ಜನರಿಂದ ಕಾಲುವೆ ಮುಂತಾದ ಉಪನದಿಗಳಲ್ಲಿ ನೀರಿನಿಂದ ತುಂಬಿ ಹರಿದು, ಅನ್ನ ಸಂಪತ್ತು ಬೆಳಸಿದವು.

ಭರತಕುಲೋತ್ಪನ್ನ ವಿಶ್ವಾಮಿತ್ರ ಸಂಬಂಧಿಗಳೆಲ್ಲಾ, ವಿಶ್ವಾಮಿತ್ರರಂತೆಯೇ, ಅನುಗೃಹೀತರಾಗಲಿ. ಒಂದಾಗಿ ಸಂಗಮಿಸಿದ ನದಿದಾಟಲು ವಿಶ್ವಾಮಿತ್ರರಂತೆಯೇ ಅನುಕೂಲಿತರಾಗಲಿ. ಪಾಪರಹಿತ ಅಘೂಳಿತ ವಿಪಾಟ ಮತ್ತು ಶತದ್ರಿ ನದಿಗಳ ಪ್ರವಾಹವು ವಾಹಕಗಳ ಕತ್ತಿನ ಹಗ್ಗವನ್ನೂ ಸ್ಪರ್ಶಿಸದೇ, ಕೆಳಭಾಗದಲ್ಲೇ ಹರಿಯಲಿ. ನದಿದಾಟುವವರೆಗೆ ಪ್ರವಾಹ ಏರದಿರಲಿ. ಇಂದ್ರಪ್ರೇರಿತರಾಗಲಿ, ಎಂದು ವಿಶ್ವಾಮಿತ್ರರು ನದೀದೇವತೆಗಳನ್ನು ಸ್ತುತಿಸುತ್ತಾರೆ.

### ಸೂಕ್ತ 34 - (ಇಂದ್ರಃ ಪೂರ್ಭಿದಾತಿರದ್ದಾ.....

ವಿಶ್ವಾಮಿತ್ರ ಋಷಿಗಳು, ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಪ್ರವೃದ್ಧಮಾನಕರ್ಮಿ, ನಾನಾ ಶ್ರೇಷ್ಠಕರ್ಮಗಳಿಂದ ಸ್ತುತಿತ, ಉತ್ತಮ ಮಾರ್ಗದರ್ಶಿ, ಮಾನವರ ಇಷ್ಟಾರ್ಥ ಪೂರೈಸುವವ, ಸೂರ್ಯನನ್ನು ಬೆಳಗುವಂತೆ ಮಾಡುವವ, ತೇಜಸ್ಸಿಂದ ಅಹಸ್ಸನ್ನುಂಟು ಮಾಡುವವ, ಸ್ತುತಿಯನ್ನು ಆಲಿಸುವವ, ಶತ್ರುಆಕ್ರಮಣ ತಡೆಯಬಲ್ಲವ, ವನದಲ್ಲಿ ಗುಪ್ತನಾಗಿದ್ದು ಅಸುರರನ್ನು ಸೀಳಿದವ, ವೃತ್ರನನ್ನು ಸೀಳಿದವ, ಅಂಧಕಾರದಲ್ಲಿದ್ದ ಗೋವುಗಳನ್ನು ಬಿಡಿಸಿದವ, ಶತ್ರುಸೈನ್ಯ ಜಯಿಸಿ ಪ್ರಕಾಶಿಸಿದವ.

ಇಂದ್ರನು ಸ್ತುತಿಕರ್ತರ ಅನುಕೂಲಕ್ಕಾಗಿ ಉಷಸ್ಸುಗಳ ಕಾಂತಿ ವೃದ್ಧಿಸಿ ಬೆಳೆಸಿದನು. ಅಹಸ್ಸಿನ ತೇಜಸ್ಸನ್ನು ವೃದ್ಧಿಸಿ ಶರೀರ ವೃದ್ಧಿಹೊಂದಿ, ದ್ಯಾವಾಪೃಥ್ವಿಗಳನ್ನು ತೃಪ್ತಿಗೊಳಿಸಿದನು.

ಇಂದ್ರನು ವೈದಿಕ ಪ್ರಜೆಗಳಿಗೂ, ಮನುವಿನಿಂದ ಉತ್ಪನ್ನ ಪ್ರಜೆಗಳಿಗೂ, ಅಗ್ರಗಾಮಿ. ಸ್ವರ್ಗವನ್ನೂ, ಪ್ರಕಾಶಮಾನ ಉದಕಗಳನ್ನೂ, ಅನುಭವಿಸಿದ ಇಂದ್ರನು, ಸ್ತೋತೃಗಳ ಸ್ತುತಿಗಳಿಂದ ಹರ್ಷಿತನಾಗುತ್ತಾನೆ. ಪ್ರಾಣಿಗಳ ಉಪಕಾರಕ್ಕಾಗಿ ಓಷಧಿ ವೃಕ್ಷಗಳನ್ನು ಸೃಷ್ಟಿಸಿ, ಅಂತರಿಕ್ಷ ನಿರ್ಮಿಸಿ, ಪೃಥ್ವಿ ಅಂತರಿಕ್ಷ ದ್ಯುಲೋಕಗಳನ್ನು ಆಯಾಲೋಕದ ವಾಸಿಗಳಿಗೇ ಹಂಚಿಕೊಟ್ಟನು.

ಭೋಜನ ಒದಗಿಸುವ ಗೋವು, ಪ್ರಕಾಶ ಒದಗಿಸುವ ಸೂರ್ಯ, ಅಶ್ವ, ಸುವರ್ಣ, ಧನ ಇವನ್ನೆಲ್ಲಾ ಯಜ್ಞಕರ್ತರ ಸಹಾಯಕ್ಕಾಗಿ ಒದಗಿಸಿದನು.

ಯುದ್ಧನಿರತ ಮಾನವರಿಗೆ ಬೇಕಾದ ಧನ ಒದಗಿಸಿ, ಯುದ್ಧೋತ್ಸಾಹ ಬೆಳೆಸಿ, ಇಂದ್ರನು ಶತ್ರುಸೇನೆಯನ್ನು ಮಾನವರಂತೆಯೇ ಪ್ರವೇಶಿಸಿದನು. ಪಾಪರೂಪಿ ಅಸುರರನ್ನು, ಶತ್ರುಗಳನ್ನು ವಂಚನೆಯಿಂದ, ಪರಾಕ್ರಮದಿಂದ, ಬಲದಿಂದ, ಪೂರ್ಣ ನಾಶಮಾಡಿದನು. ದಸ್ಯುನಾಶಮಾಡಿ ಆರ್ಯ ಜನಾಂಗದ, ತ್ರಿವರ್ಣದವರನ್ನೂ ರಕ್ಷಿಸಿದನು.

ಯುದ್ಧದಲ್ಲಿ ಗಳಿಸಿದ ಧನವನ್ನು ಯಜ್ಞಕರ್ತರಿಗೇ ಹಂಚಿದ. ಮೇಘ ಸೀಳಿ ಉದಕ ಸುರಿಸಿದ, ಇಂದ್ರನ ಶ್ರೇಷ್ಠಕರ್ಮಗಳನ್ನು ಯಜ್ಞಗೃಹದಲ್ಲಿ ಮೇಧಾವಿ ಋತ್ವಿಜರು ಪ್ರಶಂಸಿಸುತ್ತಾರೆ.

ಅನ್ನ ಲಾಭಾರ್ಥದ ಯುದ್ಧದಲ್ಲಿ ಯಜಮಾನರ ಅನ್ನಾರ್ಥ, ರಕ್ಷಣಾರ್ಥ, ಶಕ್ತಿತೋರುವಂತೆ, ಯಜಮಾನರು ಇಂದ್ರನನ್ನು ಸ್ತುತಿಸಿ ಕರೆಯುತ್ತಾರೆ.

### ಸೂಕ್ತ - 35 (ತಿಷ್ಠಾ ಹರೀ ರಥ ಆ ಯುಜ್ಯಮಾನಾ......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಬಹುಜನರಿಂದಾಹ್ವಾನಿತ, ಸ್ತುತಿ ಆಲಿಸುವವ, ಅನೇಕರ ಸಹಾಯಕ. ಪ್ರಬಲ ಯುದ್ಧಮಾಡುವವ, ಬರ್ಹಿಯೇ ಇವನ ವಾಸಸ್ಥಾನ.

ಇಂದ್ರನ ಅಶ್ವಗಳು 'ಹರಿಗಳು' ರಕ್ತವರ್ಣದ, ಮಿತ್ರಭೂತ ಕ್ಷಿಪ್ರಗಾಮಿಗಳು, ಆಕರ್ಷಕ ಪೃಷ್ಠದ ಕಾಮವರ್ಷಕಗಳು. ಮಂತ್ರ ಪಠಣದ ದೃಢಸ್ತುತಿಗಳೊಂದಿಗೆ ಸುಖರಥ ಸೇರುವುವು.

ಪ್ರವಾಹಿಸೋಮವು, ಹೋತೃ ಯಜ್ಞಸಂಬಂಧಿ, ಶಕ್ತಿಪೂರ್ವಕ, ಆಹುತಿರೂಪಿ. ಅಧ್ವರ್ಯುವು, ಇಂದ್ರನಿಗಾಗಿಯೇ ಸೋಮರಸಕ್ಕೆ ಉದಕ ಮತ್ತು ಹಾಲು ಸೇರಿಸಿ, ಪರಿಷ್ಕರಿಸಿದ್ದಾನೆ. ಅಶ್ವಗಳಿಗಾಗಿಯೇ, ತೃಣ ಯವ ಧಾನ್ಯಗಳೂ ಸಿದ್ಧವಾಗಿದೆ.

ಇಂದ್ರನು ಮರುತ್ತುಗಳೊಡಗೂಡಿ, ಅಶ್ವರಥದಲ್ಲಿ ಯಜ್ಞಕ್ಕೆ ಬಂದು ದರ್ಭಾಸೀನನಾಗಲಿ. ಪೂಜ್ಯ ಸಾಮರ್ಥ್ಯ ಪೂರ್ಣಯಜ್ಞಕ್ಕೆ, ಕರ್ಮ ಅರಿತವನಾಗಿ, ಅನುಕೂಲ ಮನಸ್ಕನಾಗಿ, ವೈದಿಕಯುಕ್ತ ಸ್ತುತಿಗ್ರಹಿಸುತ್ತಾ, ಯಜಮಾನಾಭಿಮುಖ ಬರಲಿ.

ಹಿಂಡಿದ ಸೋಮವನ್ನು, ಇಂದ್ರನು, ಅಗ್ನಿಯಜ್ವಾಲಾರೂಪಿ ಜಿಹ್ವೆಯಮೂಲಕ, ಮರುತ್ತುಗಳೊಡನೆ, ಹರ್ಷಕ್ಕಾಗಿ ತೃಪ್ತನಾಗುವಷ್ಟು ಅಧಿಕವಾಗಿ, ಸ್ವಾಹಾಪೂರ್ವಕವಾಗಿ ಸೇವಿಸಲಿ.

ಇಂದ್ರನನ್ನು ಅನ್ನಲಾಭಾರ್ಥ ರಕ್ಷಣಾರ್ಥ ಯುದ್ಧದಲ್ಲಿ ಶಕ್ತಿತೋರಲು ಕರೆಯುತ್ತಾರೆ. ಅಶ್ವಗಳು ಬೇರೆಯವರನ್ನು ಸೇವಿಸದಿರಲಿ; ಹಾಗೂ ಆಕರ್ಷಿಸದಿರಲಿ. ಸೇಚನಾ ಸಾಮರ್ಥ್ಯದ ಶತ್ರುಗಳಿಂದ ರಕ್ಷಿಸಲಿ -ಎಂದು ಯಜಮಾನನು ಪ್ರಾರ್ಥಿಸುತ್ತಾನೆ.

## ಸೂಕ್ತ - 36 (ಇಮಾಮೂ ಷು ಪ್ರಭೃತಿಂ ಸಾತಯೇ........

ಋಷಿ ವಿಶ್ವಾಮಿತ್ರರು ಘೋರ ಅಂಗೀರಸರು ಇಂದ್ರ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಜಗತ್ ಮಾರ್ಗದರ್ಶಿ, ಸರ್ವರಿಂದಾವೃತ, ಸಾರಯುತ ಸೋಮಪಾನಿ, ಕಾವ್ಯಾತ್ಮಕಸ್ತುತಿಯಿಂದ ಸಮನ್ವಿತ, ಸಾಹಸಪ್ರದರ್ಶಕ, ಸರೋವರದಂತಹ ಉದರ ಹೊಂದಿರುವವ.

ಇಂದ್ರನನ್ನು ಸೋಮವು ತೃಪ್ತಿಗೊಳಿಸಿದಾಗ, ದ್ಯಾವಾಪೃಥ್ವಿಗಳು ಸಹಾ ಇಂದ್ರನನ್ನು ಮೀರಿ ವ್ಯಾಪಿಸಿದವು, ನದಿಗಳು ಸ್ವೇಚ್ಛೆಯಿಂದ ಅಗಾಧ ಸಮುದ್ರ ಸೇರಿದವು, ಅಂತರಿಕ್ಷ ವಿಸ್ತಾರಗೊಂಡಿತು.

ಸೋಮಶಕ್ತಿಯು ಉತ್ತೇಜಕ, ಸ್ವರ್ಗಫಲದಾತ, ಅಭೀಪ್ಸಿತ, ಅಧ್ವರ್ಯುವಿನಿಂದ ಪುರಾತನ ಹಾಗೂ ನೂತನ, ಪರಿಷ್ಕೃತ ಖಂಡಾತ್ಮಕ, ಮಧುರ ರಸಧಾರೆ ಸೋಮವು, ಹಿಂಡಿ ಶೋಧಿತವಾಗಿ ಆದರದಿಂದ, ಇಂದ್ರಾರ್ಪಣೆಗಾಗಿಯೇ ಸಿದ್ಧಗೊಳ್ಳುತ್ತದೆ.

ಅನೇಕರ ಯಜ್ಞಕ್ಕಾಗಿ ಇಂದ್ರನು, ಹಿಂದಿನಂತೆಯೇ ಈಗಲೂ ಬರಲಿ. ಮಾರ್ಗದಲ್ಲಿ ಯಾರೂ ತಡೆಯದಿರಲಿ. ದೇವತೆಗಳಿಗೆ ಸೋಮ ಹಂಚಿ, ರಕ್ಷಕ ಮರುತ್ತುಗಳೊಡನೆ ಸರೋವರದಂತಹ ತನ್ನ ಉದರ ತುಂಬಿಕೊಳ್ಳಲಿ.

ಇಂದ್ರನು ವೃದ್ಧಿಗೊಳ್ಳಲಿ. ಅನ್ನಲಾಭಾರ್ಥ ಯುದ್ಧದಲ್ಲಿ, ಯಜಮಾನನ ರಕ್ಷಣೆಗೆ ಬರಲಿ. ನೂರುವರ್ಷಗಳ ಜೀವನ ಅನುಗ್ರಹಿಸಲಿ. ವೀರಪುತ್ರರನ್ನು ಕೊಡಲಿ. ಶೀಘ್ರವಾಗಿ ಪೂಜ್ಯ ಧನ ತರಲಿ.

## ಸೂಕ್ತ - 37 (ವಾರ್ತ್ರಹತ್ಯಾಯ ಶವಸೇ.......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಗಾಯತ್ರೀ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ನೂರು ಯಜ್ಞಪೂಜಿತ, ಯಜ್ಞಕರ್ತಧಾರಕ, ಅನೇಕ ಸಾಹಸ ಕರ್ಮಕರ್ತ, ಅನೇಕರಿಂದ ಸ್ತುತಿತ, ಪ್ರಾರ್ಥಿತ. ಪಂಚವಿಧಾತ್ಮಕ ಜನರಲ್ಲಿ ಇರುವ, ಇಂದ್ರಿಯಶಕ್ತಿಗಳೆಲ್ಲಾ, ಇಂದ್ರ ಪ್ರೇರಿತವಾದದ್ದೇ.

ಧನವಿಷಯದಲ್ಲಿ, ಶೂರರಲ್ಲಿ, ಶಕ್ತಿಯಲ್ಲಿ, ಅಭಿಮಾನಿಪುರುಷರಲ್ಲಿ, ಇಂದ್ರವಿರೋಧಿಗಳು ಯಾರಿದ್ದರೂ, ಅವರನ್ನು ಇಂದ್ರನು ಸೋಲಿಸುತ್ತಾನೆ.

ವೃತ್ರಹನನಕ್ಕೆ, ಶತ್ರುನಾಶಕ್ಕೆ, ಬೇಕಾದ ಅನಂತ ಶಕ್ತಿವೃದ್ಧಿಗೆ, ಉತ್ತೇಜನಕ್ಕಾಗಿ ಯಜಮಾನನು ಇಂದ್ರನನ್ನು ಸುತ್ತುವರಿದು, ಅವನ ಮಹಿಮೆಯನ್ನು, ನೂರಾರು ಸ್ತೋತ್ರಗಳಿಂದ ಪ್ರಾರ್ಥಿಸಿ ಆಹ್ವಾನಿಸುತ್ತಾನೆ.

ಸಮೀಪ ಅಥವಾ ದೂರಪ್ರದೇಶದಿಂದ, ಉತ್ತಮ ಪ್ರದೇಶದಿಂದ, ವಜ್ರಾಯುಧಿ ಇಂದ್ರನು, ಯಜ್ಞಪ್ರದೇಶಕ್ಕೆ ಬರಲಿ. ಅವನ ಮನಸ್ಸು, ದೃಷ್ಟಿ ಯಜಮಾನಾಭಿಮುಖಿ ರಕ್ಷಣಾರ್ಥವಾಗಿ ಇರಲಿ.

ಸೋಮವು ಯಜ್ಞಕರ್ಮ, ಶಕ್ತಿವರ್ಧಕ, ಕಾಂತಿಯುತ, ಪ್ರಬೋಧವಾಗಿದೆ. ಇಂದ್ರನು ಸೋಮ ಹಾಗೂ ಅರ್ಪಿತ ಅನ್ನವನ್ನು ಸೇವಿಸಲಿ. ಶತ್ರುವನ್ನು ಸೋಲಿಸಲು ಶಕ್ತಿ ವೃದ್ಧಿ ಮಾಡಿಕೊಳ್ಳಲಿ. ಶತ್ರುಗಳಿಗೆ ಸಿಲುಕದ ಧನವನ್ನು ಯಜಮಾನನಿಗೆ ಸೇರಿಸಲಿ.

## ಸೂಕ್ತ - 38 (ಅಭಿ ತಷ್ಟೇವ ದೀಧಯಾ ಮನೀಷಾಮತ್ಯೋ.....

ಋಷಿ ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ವಾ, ದ್ವೌ ವಾ ತೌ ವಿಶ್ವಾಮಿತ್ರೋ ವಾ ಇವರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ನಾನಾರೂಪ ಅದ್ಭುತಕರ್ಮಿ, ಜಗತ್ತಿಗೆ ಉತ್ತಮ ಮಾರ್ಗದರ್ಶಿ, ಅನ್ನಲಾಭಾರ್ಥ ಯುದ್ಧದಲ್ಲಿ ಶಕ್ತಿಕೊಡುವವ.

ಇಂದ್ರಾವರುಣರು, ಸ್ತೋತೃವಿಗೆ ದೇವ ಸಂಬಂಧಿಗಳು, ಶ್ರೇಯಸ್ಸಾಧಕರು, ಸಂರಕ್ಷಕರು, ರಕ್ಷಕ ಭರವಸೆ ಕೊಡುವವರು. ಯಜ್ಞಸಾಮಗ್ರಿಗಳನ್ನು ಸವನತ್ರಯದಲ್ಲಿ ಒದಗಿಸಿ, ಯಜ್ಞಕ್ಕೆ ಬರುವವರು.

ಋಷಿಗಳು ನಿಯಮನದಿಂದ ಕೂಡಿದ, ದೇವತ್ವ ಪಡೆದ ಶ್ರೇಷ್ಠ ಕರ್ಮದವರು. ದೇವಲೋಕ ನಿರ್ಮಿತರು. ಇವರ ಉತ್ಪತ್ತಿ ಕ್ರಮವನ್ನು ಈಶ್ವರನಿಂದ ತಿಳಿಯಬೇಕು. ಋಷಿಗಳು ಇಂದ್ರನ ದಾಹ ಅಡಗಿಸಲು ಉದಕ ಸೃಷ್ಟಿಸಿ, ಅವನನ್ನು ಅಲಂಕಾರದಿಂದ ಸ್ತುತಿಸಿದರು.

ಗಹನಕರ್ಮಿಗಳಾದ ಕವಿಗಳು, ಇಂದ್ರನ ಸಾಹಸ ಕರ್ಮಗಳನ್ನು, ಸಕಲ ಲೋಕ ಶಕ್ತಿವೃದ್ಧಿಗಾಗಿ, ಪರಸ್ಪರ ಸೇರಿದ ದ್ಯಾವಾಪೃಥ್ವಿಗಳನ್ನು, ಓಷಧಿ, ಪರ್ವತ ಸಾಮಗ್ರಿಗಳಿಂದ ಪರಿಷ್ಕರಿಸಿದರು. ನಂತರ ದ್ಯಾವಾಪೃಥ್ವಿಗಳು ವಿಸ್ತಾರಗೊಂಡು, ನಿಯಮದಲ್ಲಿ ನಿಂತವು. ಅವುಗಳ ನಡುವೆ ಅಂತರಿಕ್ಷ ನಿರ್ಮಿತವಾಯಿತು.

ಕವಿಗಳು ರಶ್ಮಿರೂಪ ಕೇಶಿ, ಸೋಮ ರಕ್ಷಕ, ಗಂಧರ್ವನನ್ನು ಧ್ಯಾನದಿಂದ ಸಾಕ್ಷಾತ್ಕರಿಸಿಕೊಂಡಿದ್ದಾರೆ. ವಿವಿಧ ಗೋವುಗಳನ್ನು ನಿರ್ದೇಶಿಸಿ ಹವಿರ್ಯೋಗ್ಯಕ್ಷೀರ ಕರೆಯುತ್ತಾರೆ.

ಹೊಸಶಕ್ತಿ ವಿಶೇಷ ಧರಿಸಿದ ಇಂದ್ರನಲ್ಲೇ, ಕವಿಗಳು ತಮ್ಮ ಸ್ವರೂಪವನ್ನು ಐಕ್ಯಮಾಡಿದರು. ಇಂದ್ರಕಾಂತಿಗೂ, ಕವಿಕಾಂತಿಗೂ, ವ್ಯತ್ಯಾಸವನ್ನು ಯಾರೂ ತಿಳಿಯಲಾರರು. ಇಂತಹ ಕಾಂತಿಯುತ ಪುರುಷನ ಉತ್ತಮ ಸ್ತುತಿಯಿಂದ ಪ್ರಶಂಸಿತನಾಗಿ, ಜಗತ್ ತೃಪ್ತಿದಾಯಕ ದ್ಯಾವಾಪೃಥ್ವಿಗಳಿಗೂ, ಇಂದ್ರಖ್ಯಾತಿ ವ್ಯಾಪಿಸಿದೆ.

ಇಂದ್ರನನ್ನು ಕುರಿತು ಸ್ತುತಿಗಳನ್ನೂ, ಅವನ ಪ್ರಿಯ ಕರ್ಮಗಳನ್ನೂ ಶ್ರದ್ಧೆಯಿಂದ, ಕಾಂತಿಯಿಂದ, ದೇವತಾತ್ಮ ಕವಿಗಳು ಸಂದರ್ಶಿಸಿ, ನಿರ್ಮಿಸಲಿ. ಕರ್ಮನೆರವೇರಿಸಲಿ.

ಇಂದ್ರನನ್ನು ಉದ್ದೇಶಿಸಿದ ತೃಪ್ತಿಕಾರಕ, ಮನೋವೇಗದ ವೃದ್ಧಿಕಾರಕ, ಸ್ತುತಿಗಳು ಇಂದ್ರನನ್ನು ಸೇರಲಿ. ಸ್ತೋತೃ ಸ್ತುತಿಯಿಂದ, ಹೃಷ್ಟನಾಗಿ ಇಂದ್ರನು, ಯಜಮಾನನಿಗೆ ಧನಕೊಡಲು ಹಿಡಿದಿದ್ದಾನೆ.

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಕ್ಷೀರದಲ್ಲಿನ ದ್ರವವನ್ನು ತಿಳಿದವನು, ಅಂಧಕಾರವನ್ನು ಪ್ರಕಾಶದಿಂದ ಬೇರೆಮಾಡಿದವನು. ಉಷೋದೇವಿಯ ಪುತ್ರರಾದ, ತಮೋನಾಶಕ ಯುಗ್ಮಯುಗಳರಾದ, ಅಶ್ವಿನೀದೇವತೆಗಳು, ಯಜ್ಞಗೃಹದಲ್ಲಿ ನಡೆವ ಕರ್ಮಗಳಲ್ಲಿ ಐಕ್ಯರಾಗುತ್ತಾರೆ. ಉಷಃಕಾಲದಲ್ಲಿ ಪುರಾತನ, ಶುಕ್ಲವರ್ಣ ತೇಜೋರೂಪಿ ಕಲ್ಯಾಣಾತ್ಮಕ ಸ್ತುತಿಗಳು, ನಿರ್ಮಿತವಾದವಾಗಿವೆ.

ಅಂಗೀರಸ್ಸುಗಳು ಪಿತೃಪಿತಾಮಹ ರೂಪಿಗಳು, ಇಂದ್ರನನ್ನು ಸುತ್ತುವರೆದವರು, ಅಧೂಶಿತರು, ಇಂದ್ರನಿಂದ ಸಮೃದ್ಧ ಗೋಸಮೂಹ ಪಡೆದವರು, ನವಮಾಸ ಸತ್ರ, ದಶಮಾಸ ಸತ್ರ ಯಾಗ ಆಶ್ರಯಿಸಿ, 'ಸೂರ್ಯ' ಫಲ ಪಡೆದವರು.

ಅನ್ನಲಾಭಾರ್ಥ ಯುದ್ಧದಲ್ಲಿ ಶಕ್ತಿತೋರಿಸಲು ಇಂದ್ರನಿಗೆ ಆಹ್ವಾನ. ಇಂದ್ರನಿಗೆ ಯಜ್ಞಗೃಹದಲ್ಲಿ ಮನಃಪೂರ್ವಕವಾದ ಸ್ತುತಿ ಪಠಿತವಾಗುತ್ತಿದೆ. ಸ್ತುತಿಯನ್ನು ಸೇವಿಸಲು, ಆಲಿಸಿ ತಿಳಿಯಲು, ತನ್ನಲ್ಲೇ ಸೇರಿಸಿ ಕೊಳ್ಳಲು ಯಜಮಾನನ ಪ್ರಾರ್ಥನೆ.

ಯಜಮಾನರು, ಪಾಪದೂರ ಭಯರಹಿತ ಸ್ಥಾನದಲ್ಲಿ ಇರಲು ಅಪೇಕ್ಷಿಸುತ್ತಾರೆ. ಸೂರ್ಯನು ಯಜ್ಞಕರ್ಮಕ್ಕಾಗಿ ದ್ಯಾವಾಪೃಥ್ವಿಯನ್ನು ಪ್ರಕಾಶಿಸಲಿ. ಇಂದ್ರಾದಿಗಳು ಹವಿರರ್ಪಿಸುವ ಯಜಮಾನರಿಗೆ ಉದಾರವಾಗಿ ಸಮೃದ್ಧ ಧನ ಕೊಡಲಿ.

## (ಅಷ್ಟಕ - 3, ಅಧ್ಯಾಯ - 3, ಸೂಕ್ತಗಳು 40 - 62)

### ಸೂಕ್ತ - 40 (ಇಂದ್ರ ತ್ವಾ ವೃಷಭಂ ವಯಂ ಸುತೇ..........

ವಿಶ್ವಾಮಿತ್ರ ಋಷಿ ಇಂದ್ರದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಸ್ತುತಿಗಳಿಂದಾಕರ್ಷಿತ, ಅನೇಕ ಭಕ್ತರಿಂದ ಸ್ತುತಿತ.

ಸೋಮವು ದೇವಪೂಜಿತ, ಕ್ಷಯರಹಿತ, ಕಾಂತಿಯುತ, ಮಾಧುರ್ಯಯುತ, ಮದಕರ, ಪ್ರಕಾಶಮಾನಿ, ಆಹ್ಲಾದಕರ, ಹವಿರೂಪಿಅನ್ನ, ಸ್ವದೇವಲೋಕದಲ್ಲಿ ಇಂದ್ರನೊಡನಿರತಕ್ಕ ಇಂದ್ರನಿಂದಲೇ ಶುದ್ಧಗೊಳ್ಳುವವ. ಇಂದ್ರನನ್ನು ವ್ಯಾಪಿಸುತ್ತಾ ಇಂದ್ರನನ್ನು ವೃದ್ಧಿಸಲು, ಹಿಂಡಿಸಿದ್ಧವಾದ ಸೋಮ, ಸರ್ವರಿಂದಾವೃತವಾಗಿದೆ.

ಇಂದ್ರನು ಸಮೀಪ, ದೂರ, ಮಧ್ಯಪ್ರದೇಶ ಎಲ್ಲಿಯೇ ಇದ್ದರೂ ಕರೆದಾಕ್ಷಣ ಬಂದು ಯಜ್ಞದಲ್ಲಿ ಸ್ತುತಿಸೇವಿಸಿ, ಜಠರತುಂಬುವಷ್ಟು ಸೋಮ ಸೇವಿಸಲಿ. ಯಜ್ಞವೃದ್ಧಿಸಲಿ -ಎಂದು ಯಜಮಾನನ ಪ್ರಾರ್ಥನೆ.

### ಸೂಕ್ತ - 41 (ಆ ತೂ ನ ಇಂದ್ರ ಮದ್ರ್ಯಗ್ಘುವಾನಃ......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಹರ್ಷಗೊಳಿಸುತ್ತಾರೆ. ದರ್ಭಾಸನ, ಹಿಂಡುವ ಕಲ್ಲುಗಳೊಡನೆ ವೇದಿಕೆಯ ಬಳಿ ಸೇರಿದ್ದಾರೆ. ಮೂರು ಸವನಗಳಲ್ಲೂ, ತೃಪ್ತಿಯಾಗುವಷ್ಟು ನಿರ್ಮಿತ ಸೋಮ, ಶಸ್ತ್ರರೂಪ ಸ್ತುತಿ, ಪುರೋಡಾಶ ಹವಿಸ್ಸು, ಇಂದ್ರನಿಗಾಗಿ ಸಿದ್ಧಪಿದೆ.

ಇಂದ್ರನ ರಥದ ಅಶ್ವಗಳು, ಆಜ್ಯದಿಂದ ಅಥವಾ ಬೆವರಿನಿಂದ, ಕೂಡಿದ್ದು, ಕತ್ತು ದೇಹದಕೂದಲುಗಳ ಮೇಲಿಂದ ಇಳಿಯುತ್ತಿದೆ. ಇಂದ್ರನು ರಥದಿಂದ ಇಳಿದು ಯಾಗಭೂಮಿಯಿಂದ ದೂರ ನಿಲ್ಲದಿರಲಿ. ಸಿದ್ಧ ಸೋಮಪಾನಾದಿಗಳನ್ನು ಸೇವಿಸಿ ಸಂತೃಪ್ತ, ಪುಷ್ಟನಾಗಲಿ. ಹವಿಸ್ಸು ಇಚ್ಛಿಸಲಿ.

ಧನಪ್ರಾಪ್ತಿಗಾಗಿ ಇರುವ ಯಜಮಾನನನ್ನು ನಿಂದೆಗೆ ಪಾತ್ರಮಾಡದೆ ಇಚ್ಛಿತ ಅನುಗ್ರಹ ಉಂಟುಮಾಡಲಿ.

## ಸೂಕ್ತ - 42 (ಉಪ ನಃ ಸುತಮಾ ಗಹಿ ಸೋಮಮಿಂದ್ರ.......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕುಶಿಕ ವಂಶೋತ್ಪನ್ನ ಯಜಮಾನರು ಇಂದ್ರನನ್ನು ಸೋಮಪಾನಾರ್ಥ ಅನೇಕಬಾರಿ ಪ್ರಾರ್ಥಿಸಿ ಆಹ್ವಾನಿಸುತ್ತಾರೆ. ಅಶ್ವರಥದಲ್ಲಿ ಯಜ್ಞಾಭಿಮುಖ ಬಂದು ಯಜ್ಞದಲ್ಲಿ ದರ್ಭಾಸೀನನಾಗಲು ಪ್ರಾರ್ಥಿಸುತ್ತಾರೆ.

ಇಂದ್ರಪ್ರೇರಿತ, ಇಂದ್ರಸ್ತುತಿವಾಕ್ಯ, ಉಕ್ತಮಂತ್ರಗಳು, ಹಾಲು, ಯವ, ಧಾನ್ಯಮಿಶ್ರಿತ ಹಿಂಡಿದ ಸೋಮರಸಗಳನ್ನು, ಇಂದ್ರನು ಜಠರದಲ್ಲಿ ಸೇವಿಸಿ ತೃಪ್ತನಾಗಲಿ. ಇಂದ್ರಹೃದಯ ಹರ್ಷಗೊಳ್ಳಲಿ.

ಇಂದ್ರನು ಅನುಗ್ರಹಿಸಿ ಬರಲೆಂದು, ಇಂದ್ರರಕ್ಷಣಾಪೇಕ್ಷಿ ಯಜಮಾನನು, ಧನಕ್ಕಾಗಿ ಪ್ರಾರ್ಥಿಸುತ್ತಾನೆ.

## ಸೂಕ್ತ–43 (ಆ ಯಾಹ್ಯರ್ವಾಜುಪ ವಂಧುರೇಷ್ಠಾಸ್ತವೇದನು......

ವಿಶ್ವಾಮಿತ್ರ ಋಷಿಗಳು, ಇಂದ್ರದೇವನನ್ನು, ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನಿಗಾಗಿಯೇ, ಛಂದೋಪೇತ ಶ್ಯೇನ ಪಕ್ಷಿಯು, ಸೋಮವನ್ನು ತಂದಿತು. ಮರುತ ಸೇವಿತನಾಗಿ ಇಂದ್ರನು ಶತ್ರುಸೇನೆ ಸದೆಬಡಿಯುತ್ತಾನೆ. ಅನ್ನಾರ್ಥ ನಡೆದ ಯುದ್ಧದಲ್ಲಿ, ವೃತ್ರಾದಿಗಳನ್ನು ಹಿಂಸಿಸಿ, ಶತ್ರುನಾಶಮಾಡಿ, ಶತ್ರುಧನ ಸೇವಿಸಿ, ಯಜಮಾನನನ್ನು ರಕ್ಷಿಸಿದವ ಇಂದ್ರನೇ.

ಸೇಚನಾ ಸಾಮರ್ಥ್ಯಉಳ್ಳ, ಶ್ರೇಷ್ಠ ಅವಯವಗಳುಳ್ಳ, ಸಕಲ ದಿಕ್ಕಿನಿಂದಲೂ ದ್ವಿಗುಣವಾಗಿ ಶೋಭಿಸುವ ಅಶ್ವಗಳು, ಉತ್ತಮ ಆಸನದ ಮಹದಾಕಾರ ರಥಕ್ಕೆ ಸೇರಿಸಲ್ಪಟ್ಟಿವೆ. ಈ ಅಶ್ವಗಳು ಸಮಸ್ತ ಪ್ರಜೆಗಳನ್ನೂ ದಾಟಿಸಿ, ಇಂದ್ರನನ್ನು ಯಜಮಾನಾಭಿಮುಖ ಕರೆತರುತ್ತವೆ. ಯಜ್ಞದ ದರ್ಭಾಸನದ ಸಮೀಪವೇ, ಇಂದ್ರನು ಅಶ್ವಗಳನ್ನು ರಥದಿಂದಬಿಚ್ಚಿ ನಿಲ್ಲಿಸುತ್ತಾನೆ.

ಸೇವಿಸಲಿ. ಸ್ತುತಿ ಆಲಿಸಿ ಅಂಗೀಕರಿಸಲಿ.

ಇಂದ್ರನು ಯಜಮಾನನನ್ನು ಪ್ರಜೆಗಳ ರಕ್ಷಕನನ್ನಾಗಿ ಮಾಡಲಿ. ನಾಶರಹಿತ ಧನವಂತನನ್ನಾಗಿಮಾಡಲಿ.

## ಸೂಕ್ತ - 44 (ಅಯಂ ತೇ ಅಸ್ತು ಹರ್ಯತಃ ಸೋಮ........

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಬೃಹತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಕಾಮವರ್ಷಕ, ಹೊಂಬಣ್ಣದ ಆಯುಧವನು, ಶತ್ರುಗಳ ಪ್ರಾಣ ಹರಣಮಾಡುವವನಾಗಿ ವಜ್ರಾಯುಧವನ್ನು ಬಾಹುವಿನಲ್ಲಿ ಹಿಡಿದಿದ್ದಾನೆ. ಹುಟ್ಟಿದೊಡನೆಯೇ ಸಮಸ್ತಲೋಕವನ್ನೂ ಆಕರ್ಷಕ ಪ್ರಕಾಶಕಮಾಡಿ, ಪೈರುಪಚ್ಚೆಗಳಿಂದ ತುಂಬಿ, ದ್ಯುಲೋಕದಲ್ಲಿ ಯುವಸ್ವಾದ ಭೋಜನ ನಿರ್ಮಿಸಿದ್ದಾನೆ.

ಇಂದ್ರನು ಉಷಃಕಾಲದ ನಂತರ, ಹೊಂಬಣ್ಣದ ಕಿರಣಗಳ ಸೂರ್ಯ ಪ್ರಕಾಶಾನಂತರ ದ್ಯಾವಾಪೃಥಿವಿಗಳ ನಡುವೆ, ಪಚ್ಚೆವರ್ಣದ ಹರಿನಾಮಕ ಅಶ್ವಗಳ ರಥದಲ್ಲಿ, ಯಜಮಾನಾಭಿಮುಖ ಬರುತ್ತಾನೆ.

ಕಲ್ಲುಗಳಿಂದ ಹಿಂಡಿದ, ಶುದ್ಧ ಶುಭ್ರ ಕ್ಷೀರದೊಡನೆ ಸೇರಿದ ಆಕರ್ಷಕ ಪ್ರೀತಿಪಾತ್ರ ಸೋಮವು ವೇಗವಾಹಿನಿಯಾಗಿದೆ. ಇಂದ್ರನನ್ನು ಉದ್ದೇಶಿಸಿದ ಸೋಮವನ್ನು ಇಂದ್ರನು ಪ್ರಕಾಶಗೊಳಿಸುತ್ತಾನೆ.

ಇಂದ್ರನು ಯಜಮಾನನ ಸಂಪದಭಿವೃದ್ಧಿಯಾಗುವಂತೆ ಮಾಡಲಿ.

## ಸೂಕ್ತ - 45 (ಆ ಮಂದ್ರೈರಿಂದ್ರ ಹರಿಭಿರ್ಯಾಹಿ..............

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಬೃಹತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಯಜ್ಞಕರ್ತರನ್ನು, ಅವರ ಅಭಿಮತ ಪ್ರಧಾನದಿಂದ ಪೋಷಿಸುತ್ತಾನೆ. ಮೇಘ ಸೀಳಿ ಉದಕ ಸುರಿಸುತ್ತಾನೆ. ಬಲಶಾಲಿ ಶತ್ರುಗಳನ್ನೂ ನಾಶಮಾಡಲು ಶಕ್ತ. ಸೋಮ ಪ್ರವಾಹವನ್ನು ತನ್ನ ಜಠರದಲ್ಲಿ ಶೇಖರಿಸಿಕೊಂಡು, ಬಲವೃದ್ಧಿಸಿಕೊಳ್ಳುತ್ತಾನೆ.

ಇಂದ್ರನು ದಾರಿಯಲ್ಲಿನ ಪ್ರತಿಬಂಧಕಗಳನ್ನೆಲ್ಲಾ ದಾಟಿ, ಕಾಂತಿಯುತ ಆಕರ್ಷಕ ಕೂದಲಿನ ಅಶ್ವದೊಡನೆ, ಯಜಮಾನನ ಯಜ್ಞಕ್ಕೆ ಬರಲಿ. ದಾರಿಯಲ್ಲಿ ಯಾರೂ ಇಂದ್ರನನ್ನು ತಡೆದು ನಿಲ್ಲಿಸದಿರಲಿ.

ಇಂದ್ರನು ಯಜಮಾನನಿಗೆ ಶ್ರೇಷ್ಠ ಅನ್ನದಾತನಾಗಲಿ. ತೃಪ್ತಿ ಉಂಟುಮಾಡುವ ಧನವನ್ನು ಹರಿಸಲಿ. ವ್ಯವಹಾರ ಜ್ಞಾನವುಳ್ಳಶತ್ರುಹಿಂಸಕರಾದ ಪುತ್ರರನ್ನು ಕೊಡಲಿ.

## ಸೂಕ್ತ - 46 (ಯುಧ್ಮಸ್ಯ ತೇ ವೃಷಭಸ್ಯ........

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಇಂದ್ರನ ಪರಾಕ್ರಮ ಅತ್ಯದ್ಭುತವಾಗಿದೆ. ಇಂದ್ರನು ಸಮಸ್ತ ಪ್ರಪಂಚಕ್ಕೆ ಒಬ್ಬನೇ ಪ್ರಭು. ಧನಕ್ಕೆ ನಾನಾಪ್ರಯೋಜನ ತೋರುವವನು. ಪೃಥ್ವಿಗಿಂತ ವಿಸ್ತಾರನಾಗಿ, ಅಂತರಿಕ್ಷಕ್ಕಿಂತ ಅಧಿಕನಾಗಿ, ದೇವತೆಗಳೆಲ್ಲರಿಗಿಂತ ಶಕ್ತನಾಗಿ-ಇರುವ ಇಂದ್ರನು ಸಮಸ್ತ ಭೂತಜಾತಗಳಿಗಿಂತ ಅಧಿಕವಾಗಿ ಬೆಳೆದವನು.

ಇಂದ್ರನು ಪರಾಕ್ರಮದಿಂದ ಶತ್ರುಗಳನ್ನು ಸದೆಬಡಿವ ಭಯಂಕರ ರೂಪಿ. ಶತ್ರುಭಯಂಕರನಾಗಿ, ಶತ್ರುಗಳೊಂದಿಗೆ ಯುದ್ಧಮಾಡಿ ಸೋಲಿಸುತ್ತಾನೆ.

ಅಧ್ವರ್ಯುವು ಇಂದ್ರನಿಗಾಗಿ ಮಹತ್ ಸ್ವರೂಪದ ಹಿಂಡಿದ ಶೋಧಿತ ಸೋಮವನ್ನು ಹಿಂಡಿದ್ದಾನೆ. ಸೋಮವಂತ ಇಂದ್ರನನ್ನು ಸೋಮರಸ ಪ್ರವೇಶಿಸಲಿ.

ಪುರಾತನ, ವಾರ್ಧಿಕ್ಯರಹಿತ ಇಂದ್ರನು ಯಜಮಾನನಿಗೆ ಗೃಹಾದಿವಾಸಸ್ಥಾನ ಕೊಟ್ಟು ರಕ್ಷಿಸಲಿ.

## ಸೂಕ್ತ - 47 (ಮರುತ್ವಾ ಇಂದ್ರ ವೃಷಭೋ ರಣಾಯ........

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಇಂದ್ರನು ಉತ್ಸಾಹ ವೃದ್ಧಿಮಾಡುವವ, ಭಯಂಕರ ವೃತ್ರಹನನ ಮಾಡಿ, ಸಕಲ ಶತ್ರುಗಳನ್ನೂ ಸೋಲಿಸುವವ.

ತೃಪ್ತಿದಾಯಕ ಮೇಧಾವಿ ಮರುತ್ತುಗಳ ಮತ್ತು ಇಂದ್ರರ ಪರಸ್ಪರ ಸೇವನೆಯಿಂದ ಇಂದ್ರನಿಗೆ ಶತ್ರುನಾಶಕ ಶಕ್ತಿಯುಂಟಾಯಿತು, ವೃತ್ರವಧೆ ಸಾಧ್ಯವಾಯಿತು. ಶಂಭರ ಯುದ್ಧದಲ್ಲಿ ಶಕ್ತಿ ದೊರಕಿತು; ಅಪಹೃತ ಗೋಗ್ರಹಣದಲ್ಲಿ ಸಹಾಯ ದೊರೆಯಿತು.

ಇಂದ್ರನು ಸಮಾನ ಪ್ರೀತಿಯಿಂದ, ಮರುತ್ತುಗಳೊಡನೆ ಕಾಲನಿಯಮದಂತೆ ಸೋಮಪಾನಮಾಡಲಿ. ಮದಕಾರಕ ಸ್ವಧಾರೂಪಿ ಹಿಂಡಿದ ಸೋಮ ರೂಪಿ ಅನ್ನವು, ಇಂದ್ರನ ವೀರ್ಯವೃದ್ಧಿಗಾಗಿ, ಇಂದ್ರನ ಜಠರಸೇರಲಿ. ಯುದ್ಧ ಉತ್ಸಾಹಿ ಶತ್ರುಗಳನ್ನು ಸೋಲಿಸಿ ಯಜಮಾನರಿಗೆ ಭಯವಿಲ್ಲದಂತೆ ಮಾಡಲಿ.

ಯಜಮಾನನು, ಇಂದ್ರನನ್ನು, ನೂತನವಾದ ರಕ್ಷಣೆಗಾಗಿ, ಯಜ್ಞಕರ್ಮದಲ್ಲಿ ಪ್ರಾರ್ಥಿಸುತ್ತಾನೆ.

## ಸೂಕ್ತ - 48 (ಸದ್ಯೋ ಹ ಜಾತೋ ವೃಷಭಃ........

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಕಶ್ಯಪಅದಿತಿಯರ ಪುತ್ರ. ರಮಣೀಯ ಲೋಕದಿಂದ ಉತ್ಪನ್ನನಾಗಿ

ಸೋಮಪಾನೇಚ್ಛೆಯಿಂದ, ಪರ್ವತದ ತುದಿಯ ಸೋಮಖಂಡ ರಸ ಕುಡಿದನು. ಅನ್ವೇಚ್ಛೆಯಿಂದ ತಾಯಿಯನ್ನು ನೋಡಿದಾಗ, ಆಕೆಯಲ್ಲಿ ಸೋಮರೂಪಿ ಕ್ಷೀರವನ್ನೇ ಕಂಡನು.

ಇಂದ್ರನು, ತನ್ನಿಚ್ಛೆ ಬಂದಂತೆ, ತನ್ನ ಶರೀರವನ್ನು ಮಾರ್ಪಡಿಸಿಕೊಂಡು, ಶತ್ರುಗಳನ್ನು ಓಡಿಸಿ, ಸೋಲಿಸಿ, ತೇಜಸ್ಸಿನಿಂದ ಸರ್ವತ್ರ ವ್ಯಾಪಿಸಿ, ಮಹತ್ತರ ಕಾರ್ಯವನ್ನು ಮಾಡಿದನು.

ಸ್ವಾಭಾವಿಕ ಸಾಮರ್ಥ್ಯದಿಂದ ಅಸುರ ಕೃಷ್ಣನನ್ನು ಸೋಲಿಸಿದ ಇಂದ್ರನನ್ನು, ಯಜಮಾನರು ರಕ್ಷಣಾರ್ಥ ಕರೆಯುತ್ತಾರೆ.

ಅಪೇಕ್ಷಿಸಿದಾಗಲೆಲ್ಲಾ ದೇವತೆಗಳಿಗಿಂತ ಮೊದಲೇ, ಚಮಸ ಪಾತ್ರೆಯಲ್ಲಿ, ತೃಪ್ತಿಯಾಗುವಷ್ಟು, ರಸಭರಿತ ಸೋಮಪಾನ ಮಾಡಲಿ. ಸೋಮ ಹಿಡಿದು ಸ್ತುತಿ ಪಠಿಸುವ ಯಜಮಾನನನ್ನು ಆಲಿಸಿ, ಶತ್ರುಗಳನ್ನು ಹಿಂಸಿಸಿ, ನಾಶಮಾಡಲಿ. ಶತ್ರುಧನ ಯಜಮಾನನಿಗೆ ಸೇರಿಸಲಿ.

## ಸೂಕ್ತ - 49 (ಶಂಸಾ ಮಹಾಮಿಂದ್ರಂ ಯಸ್ಮಿನ್......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನನ್ನು, ದ್ಯಾವಾಪೃಥಿವಿಗಳು ಹಾಗೂ ದೇವತೆಗಳು ಉತ್ಪತ್ತಿಯಾಗುವಂತೆ ಮಾಡಿದರು. ಜಗದಾದಿಪಥ್ಯಕ್ಕಾಗಿ, ವಿಭುವಿಂದ ಸ್ಥಾಪಿತನಾದ ಇಂದ್ರನನ್ನು ಯಾರೂ ಮೀರಿಸಲು ಆಗುವುದಿಲ್ಲ. ದ್ಯಾವಾಪೃಥಿವಿಗಳನ್ನು ವ್ಯಾಪಿಸುತ್ತಾ, ಭಗನಂತೆ ಹವಿಸ್ವೀಕಾರ ಯೋಗ್ಯನಾಗಿ, ವಸುಗಳೊಡನೆ ಸೇರಿಕೊಂಡು, ರಾತ್ರಿಯನ್ನು ಅಂಧಕಾರದಿಂದ ಮುಚ್ಚಿ, ಸೂರ್ಯನಿಗೆ ಜನ್ಮದಾತನಾಗಿದ್ದಾನೆ.

ಸ್ತುತಿಕರ್ತರ ಪಾಲಕನಾಗಿ, ರಮಣೀಯರೂಪನಾಗಿ, ಶ್ರೇಷ್ಠ ಆಹ್ವಾನಯುಕ್ತನಾಗಿ, ಐಶ್ವರ್ಯವಂತರ ಧನವಿಭಾಜಕನಾಗಿ, ಪೂಜ್ಯ ಅನ್ನ ಹಂಚುವ ಅನ್ನದಾತನಾಗಿ, ಇಂದ್ರನು ವೃಷ್ಟಿರೂಪ ಧನ ಹಂಚುತ್ತಾ ಇರುವವನಾಗಿದ್ದಾನೆ.

ಮರುತ್ತುಗಳೊಡನೆ ಶತ್ರುಶೋಧಕ ಬಲದಿಂದ, ಶತ್ರುಸೇನೆ ದಾಟುತ್ತಾ ಶತ್ರುಪ್ರಾಣಹರಣ ಮಾಡುತ್ತಾ, ವೃತ್ರಾದಿ ಅಸುರ ನಾಶಮಾಡುತ್ತಾ, ಶತ್ರುಭಯಂಕರನಾಗಿ, ಯುದ್ಧದಲ್ಲಿ ಸೇನೆಯನ್ನು ಎರಡಾಗಿ ವಿಭಾಗಿಸುವವನಾಗಿ, ಇಂದ್ರನು ಶತ್ರುಧನವನ್ನು ಯಜಮಾನನಿಗೆ ಕೊಡುತ್ತಾನೆ.

ಇಂದ್ರನ ರಕ್ಷಣೆಯಲ್ಲಿರುವ ಯಜಮಾನನು, ಯಜ್ಞಮಾಡಿ ಇಷ್ಟಾರ್ಥಗಳಿಸುತ್ತಾನೆ. ಅನ್ನಾರ್ಥ ನಡೆವ ಯುದ್ಧದಲ್ಲಿ ಸುಖ ಹೊಂದುತ್ತಾನೆ. ಇಂತಹ ಇಂದ್ರನನ್ನು ಶಸ್ತ್ರಮಂತ್ರ ಪಠಣಗಳಿಂದ ಸ್ತುತಿಸಿ ಯಜಮಾನರು ರಕ್ಷಣೆಗಾಗಿ ಅನ್ನಧನಕ್ಕಾಗಿ ಪ್ರಾರ್ಥಿಸುತ್ತಾರೆ.

## ಸೂಕ್ತ - 50 (ಇಂದ್ರಃ ಸ್ವಾಹಾ ಪಿಬತು ಯಸ್ಯ ಸೋಮ........

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ತ್ರಿಷ್ಟುಪ್ ಛಂಧಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಇಂದ್ರನು ಸ್ತುತಿಕರ್ತರಿಗೆ ಅಭಿಮತ ಫಲದಾತ, ಸ್ತುತಿ ಆಲಿಸಿ ಕೇಳುವವ, ಸುಖ ತರುವವ, ಸ್ತುತಿಯಿಂದ ಅಭಿಮುಖ ಮಾಡಿಕೊಳ್ಳಲಾಗುವವ.

ಹವಿಸ್ಸುಗಳು ಇಂದ್ರನ ಶರೀರಕ್ಕೆ ಪುಷ್ಟಿದಾಯಕ, ಅರ್ಪಿಸಿದ ರಮಣೀಯ ಶ್ರೇಷ್ಠ ಸ್ವಾಹಾಕಾರ ಪೂರ್ವಕ ಹವಿಸ್ಸು, ಸೋಮಪಾನದಿಂದ ಇಂದ್ರನು ತೃಪ್ತನಾಗುತ್ತಾನೆ.

ಮರುತ್ತುಗಳೊಡನೆ ಯಜ್ಞವಿಘ್ನಕರನ್ನು ಹಿಂಸಿಸಿ, ಶತ್ರುಭಯಂಕರನಾಗಿ, ವೃತ್ರಾದಿ ಅಸುರರನ್ನು ನಾಶಮಾಡಿ, ಕಾಮವರ್ಷಕನಾಗಿರುತ್ತಾನೆ.

ಕುಶಿಕ ವಂಶೋತ್ಪನ್ನ ಋಷಿ, ಮಂತ್ರಾತ್ಮಕ ವಾಕ್ಯಗಳಿಂದ, ಸೂಕ್ತಗಳನ್ನು ಇಂದ್ರನಿಗಾಗಿ ರಚಿಸಿದ್ದಾರೆ. ಇಂದ್ರನು ಅಶ್ವರಥದಲ್ಲಿ ಯಜ್ಞಕರ್ಮಕ್ಕೆಬರಲಿ. ಯಜಮಾನಾರ್ಪಿತ ಗೋಕ್ಷೀರ ಮಿಶ್ರಿತ ಸೋಮವನ್ನು, ಪಾತ್ರೆಯಲ್ಲಿ ಶೀಘ್ರವಾಗಿ ಹರ್ಷದಿಂದ ಪಾನಮಾಡಲಿ.

ಯಜಮಾನನ ಅಪೇಕ್ಷೆಗಳನ್ನು ಉತ್ಕೃಷ್ಟ ಧನ ಸಂಪತ್ತು, ಧೀರ್ಘಾಯುಸ್ಸು ಯಜ್ಞೋಪಯುಕ್ತ ಕಾಂತಿಯುತ ಧನ, ಗೋ ಅಶ್ವಯುಕ್ತ ಶತ್ರುಧನಗಳಿಂದ ಇಂದ್ರನು ತೃಪ್ತಿಗೊಳಿಸಲಿ. ಅನ್ನಾರ್ಥ ಯುದ್ಧದಲ್ಲಿ ರಕ್ಷಣೆ ಒದಗಿಸಲಿ –ಎಂದು ಯಜಮಾನನ ಪ್ರಾರ್ಥನೆ.

### ಸೂಕ್ತ - 51 (ಚರ್ಷಣೀಧೃತಂ ಮಘವಾನಮುಕ್ಥ್ಯ.......

ಋಷಿ ವಿಶ್ವಾಮಿತ್ರರು ಇಂದ್ರದೇವನನ್ನು ಜಗತೀ ತ್ರಿಷ್ಟುಪ್ ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಹುಟ್ಟಿದ ಕೂಡಲೇ ಸೋಮಪಾನ ಮಾಡಿದವ. ಬಲ ಸಾಧನೆಗಾಗಿಯೇ ಸಂಚರಿಸುವವ. ಪಾಪರಹಿತ ಸ್ತುತಿ ಸೇವಿಸುವವ. ಸಂಗ್ರಾಮಕ್ಕಾಗಿ ಸಮಸ್ತ ದೇವತೆಗಳಿಂದ ಸಿದ್ಧಪಡಿಸಲ್ಪಟ್ಟಿದ್ದಾನೆ. ಮರುತ್ತುಗಳೊಡಗೂಡಿರುವವ, ಅಶ್ವಯುತನಾಗಿ ಅಹಂಕಾರಿ ಶತ್ರುಗಳನ್ನು ಯುದ್ಧಾಭಿಮುಖ ಓಡಿಸಿ ಸೋಲಿಸುವವ, ಶತ್ರುಪಟ್ಟಣ ನಾಶಮಾಡುವವ, ಅನುಗ್ರಹ ಉಪದೇಶಿಕ ವಾಸಸ್ಥಾನ ಕಲ್ಪಿಸುವ ಸಖೀಭೂತ.

ಪೃಥ್ವಿ ದ್ಯುಲ್ಲೋಕ ಓಷಧಿ ಉದಕ ವೃಕ್ಷಾದಿ ಧನಗಳೆಲ್ಲಾ ಇಂದ್ರನಿಗಾಗಿಯೇ ರಕ್ಷಿತವಾಗಿವೆ. ಸ್ವರ್ಗಪ್ರಾಪಕನಾಗಿ, ಇಂದ್ರನು ಎಲ್ಲಾಕಡೆಗಳಿಂದಲೂ, ಸಮೀಪಿಸುವ ಸ್ತುತಿ ವಾಕ್ಕು ಶಸ್ತ್ರ ಮಂತ್ರಗಳಿಂದ, ಪ್ರತಿದಿನ ಸ್ತುತಿಸಲ್ಪಡುತ್ತಾನೆ. ಸ್ಮೃತಿಗೆ ಅನುರೂಪವಾಗಿ, ಹಿಂಡಿದ ಸೋಮವು, ಯಜ್ಞಗೃಹದಲ್ಲಿ ಸಿದ್ಧವಿದೆ.

ಶರ್ಯಾತ ಪುತ್ರನ ಯಜ್ಞಕಾಲದಲ್ಲಿ, ಮರುತ್ತುಗಳೊಡಗೂಡಿ, ಸೋಮಪಾನ ಮಾಡಿದ ಇಂದ್ರನನ್ನು ಧನಲಾಭಾರ್ಥ ಯುದ್ಧದಲ್ಲಿ, ಮೇಧಾವಿ ಯಜ್ಞಕರ್ತರೆಲ್ಲರೂ, ಸ್ತುತಿಸಿ ಪೂಜಿಸುತ್ತಾರೆ.

ಮಿತ್ರ ಮರುತ್ತುಗಳು ಇಂದ್ರ ಶಕ್ತಿ ಸಂಪಾದಕರು, ಸಂತೋಷದಾಯಕರು. ನವೀನ‌ಇಚ್ಛಿತ ಹವಿರೂಪ ಅನ್ನ ಸೋಮ ಸ್ವೀಕರಿಸಲಿ. ಉದ್ದೇಶಿತ ಕ್ರಮದಲ್ಲಿ ಸೋಮಪಾನ ಮಾಡಲಿ. ಯಜಮಾನನ ಶಸ್ತ್ರ ಮಂತ್ರ ಸೇವಿಸಲಿ. ಇಂದ್ರನ ಶರೀರವು ಸೋಮದಿಂದ ತುರಿದುಂಬಲಿ, ಹರ್ಷ ಉಂಟಾಗಲಿ. ಇಂದ್ರನ ಕುಕ್ಷಿ, ಶಿರಸ್ಸು, ಬಾಹುಗಳು, ಶರೀರದ ಸಕಲ ಭಾಗಗಳೂ ಸೋಮದಿಂದ ವ್ಯಾಪಿಸಲಿ. ಯಜಮಾನ ವಿಶ್ವಾಮಿತ್ರನಿಗೆ ಇಂದ್ರನು ಧನಲಾಭ ತರಲಿ.

**ಸೂಕ್ತ - 52 (ಧಾನಾವಂತಂ ಕರಂಭಿಣಮಪೂಪವಂತಮುಕ್ಥಿನಮ್.......**

ಋಷಿ ವಿಶ್ವಾಮಿತ್ರರು, ಇಂದ್ರದೇವನನ್ನು, ಗಾಯತ್ರೀ ತ್ರಿಷ್ಟುಪ್ ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನ ಕರ್ಮಗಳು ಮಹತ್ವರೂಪ ಉಳ್ಳದ್ದೆಂದು ಪ್ರಸಿದ್ಧವಾಗಿದೆ.

ಸ್ತುತಿಗಳು, ಇಂದ್ರನಲ್ಲಿ ಶತ್ರುಸೋಲಿಸುವ ಸಾಮರ್ಥ್ಯ ಮತ್ತು ಸೌಂದರ್ಯವನ್ನೂ ನಿರ್ಮಿಸುತ್ತವೆ. ಸ್ತುತಿಕರ್ತರು, ಆಯಾ ಅತಿಶಯ ಸ್ತುತಿವಾಕ್ಯಗಳಿಂದ ಇಂದ್ರನನ್ನು ಸಮೀಪಿಸುತ್ತಾರೆ.

ಕ್ಷಿಪ್ರವಾಗಿ ಸಂಪಾದಿಸಿದ, ಯವಧಾನ್ಯ ಮಿಶ್ರಿತ, ಪಕ್ವವಾದ ಪುರೋಡಾಶಗಳು, ಪ್ರವಾಹಿ ಸೋಮಗಳು, ಇಂದ್ರನಿಗೆ ಅರ್ಪಿತ. ಯುಕ್ತ ಶಸ್ತ್ರ ಮಂತ್ರಗಳಿಂದ ಇಂದ್ರನಿಗೇ ಅರ್ಪಿತ.

ಋಭು, ವಾಜಾ, ಪೂಷ, ಮರುತ್ತುಗಳು, ಹರಿನಾಮಕ ಅಶ್ವಗಳೊಡನೆ, ಸೋಮಪಾನಕ್ಕೆ ಇಂದ್ರನು ದಯಮಾಡಲಿ. ಪುರೋಡಾಶಗಳನ್ನು ಭಕ್ಷಿಸಿ ಸೋಮಪಾನ ಮಾಡಿ, ಸ್ತುತಿ ಸೇವಿಸಲಿ, ಪ್ರಾತಃ ಸವನ, ಮಾಧ್ಯಂದಿನ ಸವನ, ತೃತೀಯ ಸವನಗಳಲ್ಲಿ ತೃಪ್ತನಾಗಲಿ.

ಸೋಮಪಾನಾನಂತರ ಯಜಮಾನನನ್ನು ಇಂದ್ರನು ಅಭಿವೃದ್ಧಿಗೊಳಿಸಲಿ.

**ಸೂಕ್ತ - 53 (ಇಂದ್ರಾಪರ್ವತಾ ಬೃಹತಾ ರಥೇನ.........**

ಋಷಿ ವಿಶ್ವಾಮಿತ್ರರು, ಇಂದ್ರ, ಪರ್ವತ, ವಾಕ, ರಥಾಂಗ ದೇವತೆಗಳನ್ನು ತ್ರಿಷ್ಟುಪ್ ಜಗತೀ ಅನುಷ್ಟುಪ್ ಗಾಯತ್ರೀ ಬೃಹತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಸ್ತುತಿಯಿಂದ ನವಸ್ತ್ರಾತನಾಗುತ್ತಾನೆ. ಒಂದೇ ಮುಹೂರ್ತದಲ್ಲಿ, ಸವನ ತ್ರಯಗಳಲ್ಲಿಯೂ ನಡೆವ ದೇವಯಜ್ಞದಲ್ಲಿ ಭಾಗಿಯಾಗಲು ಸ್ವರ್ಗದಿಂದ ಬರುತ್ತಾನೆ. ಬೇರೆಬೇರೆ ರೂಪಗಳಲ್ಲೂ ತನ್ನ ರೂಪವನ್ನು ಬದಲಾಯಿಸಿಕೊಳ್ಳುತ್ತಾನೆ.

ರಥದಲ್ಲಿ ಸ್ಥಾಪಿತ ಇಂದ್ರನು, ಯಜ್ಞಗೃಹದಲ್ಲಿ ಇದ್ದರೆ, ಪ್ರಯೋಜನಕಾರಿ. ಅವನ ಕುದುರೆಗಳಿಗೆ ವಿಮೋಚನೆ ಇಲ್ಲದಿದ್ದರೂ, ಪ್ರಯೋಜನಕಾರಿಯೇ.

ಪುರುಷನಿಗೆ, ಪತ್ನಿಯು ಗೃಹ ಮತ್ತು ಉತ್ಪತ್ತಿಸ್ಥಾನಗಳಾಗಿರುವಂತೆ, ಇಂದ್ರನಿಗೆ ಯಜ್ಞವೇ ಗೃಹ, ಪತ್ನಿರೂಪ.

ವೃದ್ಧ ಜಮದಗ್ನಿ ದತ್ತಳಾದ ಸೂರ್ಯಪುತ್ರಿ ವಾಗ್ದೇವಿಯು, ಶಬ್ದರೂಪವಾಸಿ, ಅಜ್ಞಾನ ನಾಶಕಳು, ಇಂದ್ರಾದಿಗಳಿಗೆ, ಪಂಚಜನರಿಗೆ ಕ್ಷಯರಹಿತ ಅನ್ನ, ನವತರ ಆಯುಸ್ಸು ಕೊಡುವವಳು.

ರುದ್ರಪುತ್ರ ಮರುತ್ತುಗಳು ದೇವತೆಗಳಿಗಿಂತಲೂ ಶಕ್ತರು. ಯಾಗದಲ್ಲಿ ಯಜಮಾನನಿಗೆ ಅಶ್ವ, ರಥ, ಧನ, ಆಯುಸ್ಸುಗಳನ್ನು ವೃದ್ಧಿಸುತ್ತಾರೆ.

ಕುಶಿಕ ವಂಶಜರಾದ ವಿಶ್ವಾಮಿತ್ರರು, ಅತೀಂದ್ರಿಯ ದೃಷ್ಟಿಯ, ಅತಿಶಯ ಸಮರ್ಥ ಮೇಧಾವಿಗಳು. ಪ್ರಕಾಶಮಾನ ತೇಜಸ್ವಿ ಋತ್ವಿಗ್ರೂಪರು. ಭರತ ಕುಲೋತ್ಪನ್ನರನ್ನೆಲ್ಲಾ

ರಕ್ಷಿಸುವಂತಹ ಸ್ತುತಿಯನ್ನು, ವಜ್ರಾಯುಧಿಯನ್ನೂ ಉದ್ದೇಶಿಸಿ, ದ್ಯಾವಾಪೃಥ್ವಿಗಳನಡುವೆ ತಮ್ಮ ಸಂಬಂಧಿಗಳೊಂದಿಗೆ ಸ್ತುತಿಸುತ್ತಾರೆ.

ದೇವದೂತ ಅಗ್ನಿಯ ಮೂಲಕ, ಸೋಮವು ಇಂದ್ರನಿಗೆ ಸೇರಿಸಲ್ಪಡುತ್ತದೆ. ಸೋಮಪಾನ ಮಾಡಿದ ಇಂದ್ರನು ಗೃಹಕ್ಕೆ ಬಂದಾಗ, ಅವನ ಮಂಗಳಕರ ಪತ್ನಿಯು ಆಹ್ಲಾದಿತಳಾಗುತ್ತಾಳೆ.

ಮೇಧಾವಿ ಅಂಗೀರಸ್ಸುಗಳ ನೇತೃತ್ವದಲ್ಲಿ, ಕ್ಷತ್ರಿಯ ಸುದಾಸನ ಯಜ್ಞ ನಡೆದಿದೆ. ಇದಕ್ಕಾಗಿ ವಿಪಾಟ ಮತ್ತು ಶತದ್ರಿನದಿಗಳ ಸಂಗಮವನ್ನು, ಕುಶಿಕರು ತಡೆದಿದ್ದಾರೆ. ವೃತ್ರನಾಶದಿಂದ ಸಮಸ್ತ ದಿಕ್ಕಿನಲ್ಲಿಯೂ ಯಜ್ಞವಿಘ್ನಕರನ್ನು ಇಂದ್ರನು ನಾಶಮಾಡಿದ್ದಾನೆ. ಭಯವಿಲ್ಲದೆ ಸುದಾಸನು ಅಶ್ವಗಳನ್ನು ಚಲಿಸಲು ಬಿಟ್ಟು, ಯಜ್ಞಮಾಡಲಿ.

ಋಷಿಯನ್ನು, ಪಶುವಿನಂತೆ, ಅವಿವೇಕಿಗಳು ತಮ್ಮ ಸ್ಥಾನಕ್ಕೆ ಒಯ್ಯುತ್ತಿದ್ದಾರೆ. ವಿಶ್ವಾಮಿತ್ರ ಋಷಿಯ, ನಾಶಕ ಮಂತ್ರಸಾಮರ್ಥ್ಯವನ್ನು, ಇವರು ಅರಿಯಲಾರರು. ತಪಸ್ಸು ವ್ಯರ್ಥವಾಗಬಾರದೆಂದು, ಋಷಿ ಮೌನ ಆಶ್ರಯಿಸಿದ್ದಾನೆ. ಅವಿವೇಕಿಗಳನ್ನು, ಪ್ರಾಜ್ಞರು ಅವಹೇಳನ ಮಾಡುವುದಿಲ್ಲ. ರಾಸಭವನ್ನು ಶ್ರೇಷ್ಠ ಅಶ್ವದಮುಂದೆ ಇಡುವುದಿಲ್ಲ.

ವಿಶ್ವಾಮಿತ್ರರನ್ನು ವಸಿಷ್ಠ ಸಂತತಿಯವರಿಗಿಂತ ಬೇರೆ –ಎಂದು ತಿಳಿಯುತ್ತಾರೆ. ಸಹಜ ಶತ್ರುಗಳೆಂದು ತಿಳಿಯುತ್ತಾರೆ. ಅವರ ಎದುರು ಶಸ್ತ್ರ ಸಂಧಾನ ಮಾಡುತ್ತಾರೆ. 'ಇಬ್ಬರಿಗೂ ಸಂಬಂಧವಿದೆ' ಎಂದು ಇವರು ತಿಳಿಯರು.

ಸೋಮಪಾನದಿಂದ ಪೂಜೆಗೊಳ್ಳಲು ಇಂದ್ರನು ಈ ಪ್ರದೇಶದಲ್ಲೇ ಆಸೀನನಾಗಲಿ. ದೇವತೆಗಳೊಂದಿಗೆ ಕೂಡಿ, ಅತಿಮಾಧುರ್ಯದ ಸೋಮಪಾನ ಮಾಡಲಿ. ವಿಶೇಷ ಶಕ್ತಿಯಿಂದ ಆಹುತರಾಗಿ ಅಧ್ವರ್ಯುಗಳು ಶಕ್ತಿಯುತ ಸ್ತುತಿ ರಚಿಸಲಿ. ಇಂದ್ರನು ಪ್ರೀತಿಪಾತ್ರ ಪ್ರಶಸ್ತ ಮಂತ್ರ ಸ್ತುತಿಗಳ ನಿರ್ಮಾಣಕ್ಕೆ ಅನುಮೋದಿಸಲಿ. ಕುಶಿಕರು ಅಶ್ವರಕ್ಷಕರನ್ನು ಸಮಾಧಾನ ಮಾಡಲಿ.

ರಸಭೋಗ, ಖದಿರ, ಅಣೆದ್ರು, ಶಿಂಶುಪಾ, ಅಕ್ಷ ವೃಕ್ಷಗಳಿಂದ ಮಾಡಿದ ರಥದ ದೃಢಭಾಗಗಳಾದ ಇರಚಿ, ಮಧ್ಯದಂಡ, ನೊಗ, ರಥದಕೀಲು, ನೇಮಿ–ಇವುಗಳೆಲ್ಲಾ ದೃಢವಾಗಿ ರಥಕ್ಕೆ ಸೇರಿಕೊಂಡಿರಲಿ. ರಥಸಂಚಾರ ಮುಗಿಯುವವರೆಗೂ, ಗೃಹ ಸೇರಿಸುವವರೆಗೂ, ಅಶ್ವಗಳನ್ನು ರಥದಿಂದ ಬಿಚ್ಚುವವರೆಗೂ, ವನಸ್ಪತಿ ನಿರ್ಮಿತ ರಥವು ಯಜಮಾನನನ್ನು ಸೇರಿಕೊಂಡಿರಲಿ, ತ್ಯಜಿಸದಿರಲಿ, ಬಿಂಕಿಸದಿರಲಿ, ಕೆಳಕ್ಕೆ ಬೀಳಿಸದಿರಲಿ, ರಥಕ್ಕೆ ಹಾಗೂ ಯಜಮಾನನಿಗೆ ಶಕ್ತಿಯನ್ನೂ, ಅವನ ಪುತ್ರಪೌತ್ರಾದಿಗಳಿಗೆ, ದೀರ್ಘಾಯುಸ್ಸು ಬಲ ಇವುಗಳನ್ನು ಕೊಡಲಿ. ನಾಸ್ತಿಕ ಕೀಟಕರ ಸಮೂಹದ ಗೋವುಗಳು, ಅವುಗಳ ಕ್ಷೀರ, ಇಂದ್ರನಿಗೆ ಉಪಯುಕ್ತವಲ್ಲ. ಇಂದ್ರನನ್ನು ಸೇವಿಸುವ ಕುಶಿಕರಿಗೆ, ಆ ಗೋವುಗಳನ್ನೂ ದುಷ್ಕಾಲೀನರಾದ 'ಪ್ರಮಥಂದ' ಸಂತತಿಯವರ ಧನವನ್ನೂ, ಇತರ ನಿಚಶಾಖರ ಧನವನ್ನೂ, ಯಜಮಾನನಿಗೆ

ಇಂದ್ರನು ಕುಶಿಕರಿಂದ ಸ್ತುತಿಗೊಂಡು, ಅವರನ್ನು ಶ್ರೇಷ್ಠ ಧನಗಳನ್ನಾಗಿ ಮಾಡಲಿ. ಶ್ರೇಷ್ಠ ರಕ್ಷಣೆಗಳಿಂದ ಶತ್ರು ಎದುರಿಸುವ ಯಜಮಾನನನ್ನು ತೃಪ್ತಿಗೊಳಿಸಲಿ. ಯಜಮಾನನನ್ನು ದ್ವೇಷಿಸುವ ಶತ್ರು ಕೆಳಗೆಬಿದ್ದು ನಾಶವಾಗಲಿ. ಗಾಯಗೊಂಡ ಶತ್ರು ತಪಿಸಲಿ. ಅನಾಯಾಸವಾಗಿ ಅವರ ಬಾಯಿಂದ ನೊರೆ ಸುರಿಯಲಿ.

## ಸೂಕ್ತ - 54 (ಇಮಂ ಮಹೇ ವಿಧಥ್ಯಾಯ ಶೂಷಂ........

ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ಋಷಿಗಳು ವಿಶ್ವೇದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಯಜ್ಞಾರ್ಹ ದೇವದೂತ, ಮಹಾತ್ಮ , ಮಹತ್ವ ರೂಪಿ, ಸ್ತುತಿಗೆಪಾತ್ರ, ದಿವ್ಯತೇಜಸ್ವಿ, ಶತ್ರುದಮನಿ, ಜ್ವಾಲಾ ಜಿಹ್ವೆಯವ, ಯಜ್ಞಾರ್ಥ ಉತ್ಪನ್ನನಾದವ, ಅಗ್ನಿಗಾಗಿ ಸುಖಕರ ಹವಿಸ್ಸು ಸೋಮಸ್ತುತಿ ನಮಸ್ಕಾರಗಳು ಅರ್ಪಿತ. ಅಗ್ನಿಯು ಯಜಮಾನಾಭಿ-ಮುಖನಾಗಿದ್ದು ಯಜಮಾನನನ್ನು ಪಾಪರಹಿತನೆಂದು ಸಾರಲಿ. ಸೌಹಾರ್ದದಿಂದ ಧನ ನಾಶಮಾಡದಿರಲಿ, ಧನ ಕೊಡಲಿ. ಅನುಗ್ರಹಾತ್ಮಕ ಮನಸ್ಸಿನಿಂದ ಸಮಸ್ತ ಧನವನ್ನೂ ಅಗ್ನಿಹೋತ್ರಾದಿ ಯೋಗ್ಯವಾಗಿರುವಂತೆ ಅಗ್ನಿ ಪ್ರಕಾಶಿಸಲಿ.

ದ್ಯುಲ್ಲೋಕ ದೇವತೆಗಳು, ಮಹತ್ವ್ವರೂಪಿಗಳು. ಅಪ್ರತಿಹತ ಸ್ವರೂಪರು, ಶಾಶ್ವತರು. ಉತ್ಪತ್ತಿಕಾರಕರು. ನಮಸ್ಕಾರ ಪೂರ್ವಕ ಹವಿರರ್ಪಿಸಿ, ಯಜಮಾನನು, ಧನಯಜ್ಞ ಸಮಾಪ್ತಿಗಾಗಿ ಅನುಗ್ರಹ ಬೇಡುತ್ತಾನೆ. ಇವರ ಮಾರ್ಗಮಧ್ಯದಲ್ಲಿ ಇಂದ್ರಾದಿಗಳು ತಮ್ಮ ರಥ ಸ್ಥಾಪಿಸಿದ್ದಾರೆ.

ದೇವತೆಗಳು, ನಕ್ಷತ್ರರೂಪದಲ್ಲಿ, ಅಧೋಮುಖದಲ್ಲಿ ಕಾಣಿಸಿಕೊಳ್ಳುವ ಘಾಡ ಕರ್ಮನಿರತರು; ಗುಪ್ತ ಸ್ಥಾನಿಗಳು. ಈ ದೇವತೆಗಳ ಬಳಿಗೆ ಹೋಗುವ ಸತ್ಯಾತ್ಮಕ ಮಾರ್ಗ ನಿಶ್ಚಯವಾಗಿಯೂ, ಯಾರಿಗೂ ತಿಳಿಯದು. ಪ್ರಸಿದ್ಧ ಪ್ರಭೂತ ಕರ್ಮಗಳು, ದೇವತೆಗಳಿಗೆ ಪ್ರಿಯ. ಇದರಿಂದ ಇಂದ್ರಲೋಕ ಪ್ರಾಪ್ತಿ.

ದ್ಯಾವಾಪೃಥ್ವಿಗಳು ಒಟ್ಟಿಗೇ ಸೇರಿಕೊಂಡು, ಹರ್ಷಪಡುತ್ತಾರೆ. ಇವರು ಸತ್ಯಾತ್ಮಕ ಅಂತರಿಕ್ಷಸ್ಥಾನ ಸ್ಥಾಪಕರು. ಯುದ್ಧದಲ್ಲಿ ಇವರ ಸಾಮರ್ಥ್ಯ ತಿಳಿದು, ಶೂರರು ಸ್ತುತಿಸುತ್ತಾರೆ. ದ್ವಂದ್ವಾತ್ಮಕ ಹೆಸರಿನಿಂದ ನಿತ್ಯ ತರುಣೀ ಭಗಿನಿಯರು, ಪರಸ್ಪರ ಐಕಮತ್ಯದಿಂದಿರುವವರು. ಪ್ರತ್ಯೇಕವಾಗಿದ್ದರೂ, ಪರಸ್ಪರ ಐಕಮತ್ಯವನ್ನು, ಪಕ್ಷಿಗಳಂತೆ, ಕರ್ಮದಿಂದ ಹೊಂದಿರುವವರು. ಉದಕ ಸ್ಥಾನೀಯರಾಗಿ ಅಂತರಿಕ್ಷ ಹರ್ಷಿತರಾಗಿದ್ದಾರೆ. ಮಹರ್ಷಿಗಳು, ಸ್ತುತಿವಾಕ್ಯಗಳು ಪುರಾತನ ಅಪೇಕ್ಷಿತಾರ್ಥ ಪಡೆದವರು. ಸಕಲ ಮನೋರಥ ಭೋಗಗಳನ್ನು ಅಪೇಕ್ಷಿಸುವ ಸ್ತೋತೃ ಋಷಿ ಅವುಗಳ ಮಹತ್ವ ಅರಿತು ಪೂಜೆ ಅರ್ಪಿಸಲಿ.

ಪ್ರಕಾಶ ಮರುತ್ತುಗಳು ಕಾಂತಿಯುತ ಆಯುಧ ಹೊಂದಿರುವವರು, ಶತ್ರುನಾಶಕರು, ಉದಕೋತ್ಪನ್ನರು, ಯಜ್ಞಾರ್ಹರು. ಸಮಸ್ತಭೂತ ಜಾತಗಳನ್ನೂ ಪ್ರತ್ಯೇಕಮಾಡಿ, ಅದರದರ

ಜಗತ್ತು, ನಾನಾರೂಪಾತ್ಮಕ ಜಂಗಮಾತ್ಮಕ ಪೃಥ್ವಿಯಲ್ಲಿ ಸಂಚರಿಸುವ ಇಷ್ಟಾರ್ಥಪ್ರದರಾದ ಮರುತ್ತುಗಳು, ಫಲ ಕೊಡಲು ಆತುರದಿಂದ ಇರುವರು. ಮರುತ್ತುಗಳು ಯಜಮಾನನ ಸ್ತುತಿ ಕೇಳಿ, ವೀರಪುತ್ರರನ್ನೂ, ಧನವನ್ನೂ, ಕಲ್ಯಾಣಾತ್ಮಕ ಸುಖವನ್ನೂ ಕೊಡಲಿ.

ವಿಷ್ಣುವು ಅನೇಕ ಕರ್ಮಕರ್ತ ಐಶ್ವರ್ಯಕಾರಕ, ಪೂಜಾಯೋಗ್ಯ, ವಿಸ್ತೃತವಾದ ಪಾದವಿಕ್ಷೇಪವುಳ್ಳವ. ಜಗದುತ್ಪತ್ತಿಕಾರಕ, ವಿಷ್ಣುವಿನ ಆಜ್ಞೆಯನ್ನು, ಪ್ರತ್ಯೇಕವಾಗಿರುವ ದಿಕ್ಕುಗಳೂ ಮೀರುವುದಿಲ್ಲ. ಪೂಜಾಯೋಗ್ಯ ಶಸ್ತ್ರ ಮಂತ್ರ ಸ್ತೋತ್ರಗಳು, ವಿಷ್ಣುವನ್ನು ಸೇರಲಿ.

ಅಶ್ವಿನೀದೇವತೆಗಳು ಬಂಧುರೂಪರು; ಅಪೇಕ್ಷೆಗಳನ್ನು ತಿಳಿದುಕೊಳ್ಳುವವರು. ಆಕರ್ಷಕವಾಗಿ ಒಟ್ಟಿಗೇ ಸೇರುವವರು. ಇತರರಿಂದ ಹಿಂಸಿಸಲಾಗದವರು. ಉತ್ತಮ ಧನ ಕೊಟ್ಟು ಶೋಭನ ಕರ್ಮಗಳಿಂದ ರಕ್ಷಿಸಲಿ.

ಇಂದ್ರನು ಸಮರ್ಥ ದ್ಯಾವಾಪೃಥ್ವಿಗಳನ್ನು ತನ್ನ ಸಮಸ್ತ ಮಹಿಮೆಯಿಂದ ತುಂಬಿದ್ದಾನೆ. ಪ್ರಿಯರಾದ ಋಭುಗಳೊಡನೆ ಸುಖವಾಗಿದ್ದಾನೆ. ಯಜಮಾನಾರ್ಪಿತ ಸ್ತುತಿ ಸ್ವೀಕರಿಸಿ, ಧನಲಾಭ ಮಾಡಲಿ. ಶತ್ರುಪಕ್ಷಣ ನಾಶಮಾಡಲಿ. ಪ್ರಭೂತವಾಗಿ ಪಶುಸಂಗ್ರಹಿಸಿ ಯಜಮಾನನಿಗೆಕೊಡಲಿ.

ಆದಿತ್ಯನು ಕ್ರಾಂತಿದರ್ಶಿ, ದ್ಯಾವಾಪೃಥಿವಿ ಹಾಗೂ ಸಕಲ ಪ್ರಜಾವೀಕ್ಷಕ. ಸುವರ್ಣ ಹಸ್ತದ ಶ್ರೇಷ್ಠವಾಕ್ಕುಳ್ಳ ಸವಿತೃ, ಸವನತ್ರಯ ಯಜ್ಞಕ್ಕೆ ಬರುವವ. ದೇವತೆಗಳಿಗಾಗಿ ನಿರ್ಮಿತ ಸ್ತೋತ್ರ ಸ್ವೀಕರಿಸಿ, ಸಕಲರಿಂದ ಅಪೇಕ್ಷಿತ ಫಲವನ್ನು ಯಜಮಾನನಿಗೆ ಕೊಡಲಿ.

ಆರ್ಯಮ, ಅದಿತಿ, ವರುಣ, ಇವರುಗಳ ಅಹಿಂಸಕ ಕರ್ಮಗಳು, ಅಹಿಂಸಕ ಯಜಮಾನನನ್ನು ರಕ್ಷಿಸಲಿ, ಸನ್ಮಾರ್ಗಿಗಳನ್ನಾಗಿ ಮಾಡಲಿ, ಪಶ್ವಾದಿಗಳು ಮತ್ತು ಗೃಹ ಉಂಟುಮಾಡಲಿ, ನಿಗೂಢಕರ್ಮನಾಶಮಾಡಲಿ.

ತ್ವಷ್ಟನು ಶ್ರೇಷ್ಠಕರ್ಮಕರ್ತ, ಶ್ರೇಷ್ಠಪಾಣಿ, ಧನವಂತ ಸತ್ಯಸಂಕಲ್ಪ. ಋಭು ಪೂಷರೊಡಗೂಡಿ, ಯಜಮಾನಾರ್ಪಿತ ಸೋಮ ಪಡೆಯುತ್ತಾ, ರಕ್ಷಣೆ ಧನಗಳನ್ನು ಕೊಡಲಿ.

ಪರ್ವತಾದಿ ನಿಶ್ಚಲ ಸ್ಥಾನಿಗಳು, ಮಿತ್ರಾವರುಣಾದಿ ನಿತ್ಯ ತರುಣ ಕ್ರಾಂತಿದರ್ಶಿಗಳು, ಪೃಥ್ವಿ, ದ್ಯುಲ್ಲೋಕ, ಅಬ್ದೇವತೆ, ಸೂರ್ಯ, ನಕ್ಷತ್ರ, ಅಂತರಿಕ್ಷಗಳು, ಆದಿತ್ಯ ಅದಿತಿ ದ್ಯಾವಾಪೃಥ್ವಿಗಳು ಇವರನ್ನು ಉದ್ದೇಶಿಸಿದ ಸ್ತೋತ್ರಗಳನ್ನು ಕೇಳಲಿ. ಅಗ್ನಿಮಿತ್ರಾ ವರುಣ ಆದಿತ್ಯರೂ ಆಲಿಸಲಿ. ವಾಗ್ದೇವಿಯೂ ಹವಿರರ್ಪಿಸಿದ ಯಜಮಾನನ ಸ್ತುತಿಗಳನ್ನು ಕೇಳಿ ಹರ್ಷಗೊಳ್ಳಲಿ.

ಯಜಮಾನನ ಮಾರ್ಗವು, ಸುಖಸಂಚಾರ ಯೋಗ್ಯ ಅನ್ನದಿಂದ, ಕೂಡಿರಲಿ. ಓಷಧಿಗಳಲ್ಲಿ ಮಾಧುರ್ಯಾತ್ಮಕ ಧನ ತುಂಬಿರಲಿ. ಪ್ರಭೂತ ಧನ ಮತ್ತು ಅನ್ನ ಲಭಿಸಿ ಯಜಮಾನರು ಶತ್ರುಜಯ ಸಾಧಿಸಲಿ.

## ಸೂಕ್ತ - 55 (ಉಷಸಃ ಪೂರ್ವಾ ಅಧ ಯದ್ವ್ಯೂಷುರ್ಮಹದ್ವಿ....

ಋಷಿ ಪ್ರಜಾಪತಿ ವೈಶ್ವಾಮಿತ್ರೋವಾಚ್ಯರು ವಿಶ್ವೇದೇವತೆಗಳನ್ನು ಉಷಾ ಅಗ್ನಿ ಅಹೋರಾತ್ರಿ ರೋದಸೀ ದ್ಯುನಿಶೌವಾ ದಿಶಃ ಇಂದ್ರ ಪರ್ಜನ್ಯಾತ್ಮಾ ತ್ವಷ್ಟಾ ಅಗ್ನಿ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನಿಂದ ಸ್ತುತಿಸುತ್ತಾರೆ.

ದೇವತೆಗಳು ಅಸಾಧಾರಣ ಪ್ರಾಬಲ್ಯವುಳ್ಳವರು. ಉಷೋದಯ ಕಾಲದಲ್ಲಿ ಸೂರ್ಯಜ್ಯೋತಿ ಕಾಣಿಸಿಕೊಂಡೊಡನೆಯೇ, ಯಜಮಾನರು ದೇವತೆಗಳಿಗೆ ತಮ್ಮ ಯಜ್ಞಕರ್ಮ ಅರ್ಪಿಸುತ್ತಾರೆ.

ಅಗ್ನಿಯು ಸಕಲಲೋಕ ಅರಿತಿರುವವ; ಉತ್ತಮ ಮಾರ್ಗದರ್ಶಿ. ಅರಣೀರೂಪ ಕಾಷ್ಟದಲ್ಲಿ, ಪುತ್ರನಂತೆ ಇರುವ ಅಗ್ನಿಯು, ಯಜ್ಞಾರ್ಥವಾಗಿ ಅನೇಕ ವೇದಿಕೆಗಳಿಗೆ, ಒಯ್ಯಲ್ಪಟ್ಟು ಪೃಥ್ವಿಯಲ್ಲಿ ಸ್ಥಾಪಿತನಾಗುತ್ತಾನೆ. ಪುರಾತನ ಹಾಗೂ ನೂತನ ಓಷಧಿಗಳಲ್ಲಿ, ಅಗ್ನಿಯು ಸೂರ್ಯಾತ್ಮಕವಾಗಿ, ಸ್ಥಾಪಿಸಿದ್ದಾನೆ. ಓಷಧಿಗಳಲ್ಲಿ ಪುರುಷ ಸಂಪರ್ಕವಿಲ್ಲದೇ, ಫಲಪುಷ್ಪ ಉಂಟಾಗುವಂತೆ ಮಾಡುತ್ತಾನೆ.

ಅಗ್ನಿಷ್ಟೋಮ ಕರ್ಮವು ಯಜಮಾನನ ಅನೇಕ ಅಭಿಲಾಷೆಗಳನ್ನು ಪೂರೈಸುವುದು. ಈ ಕರ್ಮದಲ್ಲಿ ಅಗ್ನಿಯು ಪ್ರಜ್ವಲಿಸಿ ಪುರಾತನ ಸ್ತುತಿವಾಕ್ಕುಗಳಿಂದ ಪ್ರಕಾಶಿತನಾಗುತ್ತಾನೆ.

ಆದಿತ್ಯನ ಕರ್ಮಗಳು, ಮಿತ್ರಾವರುಣರ ಕರ್ಮಗಳೇ ಆಗಿವೆ. ಪಶ್ಚಿಮಸ್ಥಿತ ಆದಿತ್ಯನಿಗೆ ದ್ಯಾವಾಪೃಥ್ವಿಗಳು ಮಾತಾಪಿತೃಗಳು. ಪೂರ್ವಸ್ಥಿತ ಆದಿತ್ಯನು ಅವರಿಗೆ ಪುತ್ರರೂಪಿ. ಅಗ್ನಿಯು ದ್ಯಾವಾಪೃಥ್ವಿಗಳ ಪುತ್ರಪ್ರಾಯನಾಗಿದ್ದು, ಅಂತರಿಕ್ಷದಲ್ಲಿ ಸೂರ್ಯಲೋಕದಲ್ಲಿ, ಅಗ್ನಿ ಸಂಚರಿಸುತ್ತಾನೆ. ಸಕಲ ಭೂತಜಾತಗಳೂ ದ್ಯಾವಾಗ್ನಿಗೆ, ಪರಾಙ್ಮುಖರಾಗುತ್ತಾರೆ. ಉದಕಕಾಂತಿಯಿಂದ, ಅದರ ಭಾಗ ಸಂಚರಿಸುತ್ತಾರೆ.

ಯಜಮಾನನಿಗೆ, ಯಜ್ಞ ಜ್ಞಾಪಿಸುವ ಸೂರ್ಯನು, ಯಜಮಾನನನ್ನು ಹಿಂಸಿಸದಿರಲಿ; ದೇವತೆಗಳೂ, ಪುರಾತನ ಪಿತೃಗಳೂ ಹಿಂಸಿಸದಿರಲಿ.

ಅಗ್ನಿಯು ದ್ಯಾವಾಪೃಥ್ವಿಗಳ ನಡುವೆ ಸಂಚರಿಸುತ್ತಾ ಯಜಮಾನನ್ನು ಅನುಗ್ರಹ ದೃಷ್ಟಿಯಿಂದ ನೋಡಲಿ. ರಮಣೀಯ ಸ್ತೋತ್ರಗಳನ್ನು ಕೇಳಲಿ.

ಪೃಥ್ವಿ ಮತ್ತು ಅಂತರಿಕ್ಷಗಳು ಪರಸ್ಪರ ಮಿತ್ರರು. ಪರಸ್ಪರ ರಸ ವಿನಿಮಯ ಮಾಡಿಕೊಂಡು ಪಾನಮಾಡುತ್ತಾರೆ. ದ್ಯುಲೋಕದಿಂದ ಪೃಥ್ವಿಯ ಜಲಹೀರಿ ಮೇಘವಾಗಿ ಜಲವರ್ಷಿಸಿದಾಗ, ಸತ್ಯಾತ್ಮಕ ಆದಿತ್ಯನಿಂದ ಪೃಥ್ವಿ ಉದಕದಿಂದ ತೋಯಿಸಲ್ಪಡುತ್ತದೆ.

ಪೃಥ್ವಿಯು ಸ್ಥಾವರ ಜಂಗಮ ರೂಪಿಣಿ. ಪುತ್ರಪ್ರಾಯ ಅಗ್ನಿಯನ್ನು ಜ್ವಾಲಾರೂಪದಿಂದ ನೆಕ್ಕಿದಳು. ಒಂದೂವರೆ ವರ್ಷದ ಪುತ್ರನಂತಿರುವ ಆದಿತ್ಯನನ್ನು ಪೃಥ್ವಿಯು ಹವಿಸ್ಸಿನ ದ್ವಾರಾ ನೆಕ್ಕುತ್ತಾಳೆ. ಯಜಮಾನರು ಅಂತರಿಕ್ಷಸ್ಥ ದ್ಯಾವಾಪೃಥ್ವಿಗಳನ್ನು, ಸ್ತುತಿಸುತ್ತಾರೆ.

[illegible]

ಇಂದ್ರನು ವೃಷ್ಟಿಕಾರಕ ಪರ್ಜನ್ಯಾತ್ಮಕ, ನಿಶಾಯುತ, ಪೂಜ್ಯಪ್ರಭು, ಶೂರ, ಸಕಲ ಜನೋದ್ಧಾರಕ, ಹಿತಕರಸ್ನೇಹಿತ, ಅಂತರಿಕ್ಷವ್ಯಾಪಿ.

ಇಂದ್ರನು, ಒಂದು ದಿಕ್ಕಿನಲ್ಲಿ ಮಳೆ ಉಂಟುಮಾಡಿ, ಮತ್ತೊಂದು ದಿಕ್ಕಿನಲ್ಲಿ ಮಳೆಸುರಿಸುತ್ತಾನೆ. ಇಂದ್ರನಿಂದಲೇ ಸಕಲ ಓಷಧಿಗಳೂ ಹಾಗೂ ಪುಷ್ಪ ರಸಪೂರ್ಣತೆ ಪಡೆಯುತ್ತವೆ ಮತ್ತು ಪೃಥ್ವಿ ಜನರನ್ನು ಧರಿಸಿದ್ದಾಳೆ.

ಆರು ಋತುಗಳು ಹೇಮಂತ ಶಿಶಿರಗಳೊಂದಾಗಿ, ಐದು ಋತುಗಳ ಕಾಲಾತ್ಮಕ ಅಶ್ವಗಳು ಇಂದ್ರನನ್ನು ವಹಿಸುತ್ತವೆ.

ಇಂದ್ರಮರುತ್ತರು ಯುದ್ಧದಲ್ಲಿ ಮುಂಭಾಗದಲ್ಲೇ ವಾಸಿಸುವರು.

ತ್ವಷ್ಟನು ಸರ್ವಪ್ರೇರಕ ನಾನಾರೂಪಿ, ದೇವತಾತ್ಮ ಪ್ರಜೆಗಳನ್ನು ಬಹುವಿಧ ಸೃಷ್ಟಿಸಿ ಪೋಷಿಸುತ್ತಾನೆ. ಸಮಸ್ತ ಭೂತಜಾತಗಳಿಗೂ, ಸಂಬಂಧಿಸಿದ ತ್ವಷ್ಟನು, ಇಂದ್ರ ರೇತಸ್ಸಿನಿಂದಾದ ಪೃಥ್ವಿಭೂತಜಾತಗಳನ್ನು, ಒಂದುಗೂಡಿಸಿ, ದ್ಯಾವಾಪೃಥ್ವಿಗಳನ್ನು ಒಟ್ಟಿಗೆ ಮಾಡಿ ಮಹತ್ತ್ವದ ರೂಪದವನಾಗಿ, ಶತ್ರುಧನ ಕಸಿದುಕೊಳ್ಳುವಂತೆ, ಮಾಡಿದನು.

ಇಂದ್ರನು ಅಶ್ವಯುಕ್ತನಾದುದನ್ನು, ದೇವತೆಗಳು ಅರಿಯುತ್ತಾರೆ. ಯಜಮಾನನನ್ನು ಪ್ರಶಂಸಿಸುತ್ತಾರೆ. ಇಂದ್ರ ಮಿತ್ರಭೂತ ಯಜಮಾನರು, ಸಕಲ ಧನ ಅನುಭವಿಸುವಂತಾಗಲಿ.

## ಸೂಕ್ತ - 56 (ನ ತಾಮಿನಂತಿ ಮಾಯಿನೋ ನ ಧೀರಾ ವ್ರತಾ.........

ಪ್ರಜಾಪತಿರ್ವೈಶ್ವಾಮಿತ್ರೊ ವಾಚ್ಯ ಋಷಿಗಳು ವಿಶ್ವೇದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದೇವತೆಗಳು ಸತ್ಯಾತ್ಮಕ ಕರ್ಮಿಗಳು, ಯಜ್ಞಾರ್ಥ ಶೀಘ್ರಗಾಮಿಗಳು ಅಸಾಧ್ಯ ತೇಜಸ್ವಿಗಳು, ದೇವತೆಗಳ ಲೋಕಪಾಲನಾ ಕರ್ಮಗಳು ಅತಿ ಪ್ರಾಚೀನ, ಸ್ಥಿರ ಪ್ರಸಿದ್ಧವಾದವುಗಳು, ಈ ಕಾರ್ಯಗಳನ್ನು ದ್ಯಾವಾಪೃಥ್ವಿಗಳಾಗಲೀ, ಪ್ರಜ್ಞಾವಿವೇಕಿಗಳಾಗಲೀ, ವಂಚಕಅಸುರರಾಗಲೀ ಯಾರೂ ತಡೆಯಲಾರರು. ಪರ್ವತದ ಉನ್ನತಿಯೂ ಇಂದ್ರಾದಿಗಳ ಕರ್ಮವೇ.

ದೇವತೆಗಳ ಸ್ಥಾನಗಳು ಮೂರು ಲೋಕಗಳಾಗಿವೆ. ಈ ಲೋಕದ ಪ್ರಮಾಣ ತಿಳಿದವರು ಸಾರ್ವಭೌಮ ಆದಿತ್ಯ ಅಥವಾ ಸಂವತ್ಸರ.

ಸಂವತ್ಸರ ರೂಪತತ್ತ್ವವು ಆರು ರೂಪಭಾರ ವಹಿಸುತ್ತದೆ. ಸತ್ಯಾತ್ಮಕ ಶ್ರೇಷ್ಠ ಆದಿತ್ಯನನ್ನು ಶ್ರೇಷ್ಠ ರಶ್ಮಿಗಳು ಸೇರಿಕೊಳ್ಳುತ್ತವೆ. ಜಂಗಮಾತ್ಮಕ ಮೂರುರೂಪಗಳು, ಒಂದರ

ಮೇಲೆ ಒಂದು ಸ್ಥಾಪಿತ. ದ್ಯುಲೋಕ ಅಂತರಿಕ್ಷಗಳು ಗೂಢಪ್ರದೇಶದಲ್ಲೂ, ಪೃಥ್ವಿಯು ಗೋಚರವಾಗಿಯೂ ಇವೆ.

ಸಂವತ್ಸರ ದೇವತೆಗಳು ನಾನಾರೀತೀತ ಪ್ರಕಾಶಮಾನರು. ಮೂರು ಉತ್ತಮ ಸ್ಥಾನಗಳಲ್ಲಿ ಕಲಾತ್ಮಕರು. ಅಗ್ನಿ ವಾಯು ಸೂರ್ಯರು ಸಂವತ್ಸರದ ಪುತ್ರ ರೂಪರಾಗಿ ಪ್ರಕಾಶಿಸುತ್ತಾರೆ.

ಸಂವತ್ಸರಾಭಿಮಾನಿ ದೇವತೆಗಳು ಓಷಧಿಗಳನ್ನು ಉದಕ ಪೂರ್ಣವಾಗಿ ಮಾಡುತ್ತಾರೆ. ಋತುಬೇಧಾನುಗುಣವಾಗಿ, ನಾನಾರೂಪದಿಂದ ವೃಷ್ಟಿ ವಸಂತ ಉಷ್ಣಾದಿ ಗುಣಕ್ರಮದಿಂದ ಕೂಡಿವೆ. ಓಷಧಿಗಳು ಕಾಲಾನುಗುಣವಾಗಿ ಫಲಪುಷ್ಪಾದಿ ಸ್ವರೂಪ ತಳೆಯುತ್ತವೆ. ಚೈತ್ರಾದಿ ಹನ್ನೆರಡು ತಿಂಗಳುಗಳಲ್ಲಿ, ವೃಷ್ಟಿಕಾಲದಲ್ಲಿ ಉದಕ ಪ್ರವಾಹವಿದ್ದು, ನಂತರ ವಿರಮಿಸುತ್ತದೆ.

ಮೂವರು ನದೀರೂಪ ಸ್ತ್ರೀಯರೂ, ಸವನ ತ್ರಯಗಳಲ್ಲೂ, ಇಳಿದು ಬರುತ್ತಾರೆ.

ಜಗತ್ ಶ್ರೇಷ್ಠಪಾಣಿಗಳಾದ ಮಿತ್ರಾವರುಣರು, ಅಂತರಿಕ್ಷ, ದ್ಯಾವಾಪೃಥ್ವಿಗಳು, ಆದಿತ್ಯನಿಂದಲೇ, ಇಚ್ಛಿತಧನ ಅಪೇಕ್ಷಿಸುತ್ತಾರೆ.

ದೇವತೆಗಳು ಸವನ ತ್ರಯಗಳಲ್ಲಿ, ಹವಿಸ್ಸನ್ನು ಸೇವಿಸಲು, ಪೂಜಾರ್ಹರಾಗಿ ಬಂದು ಕುಳಿತುಕೊಳ್ಳಲಿ.

ಜಗತ್‌ಪ್ರೇರಕ ಭಗವತ್ ರೂಪಿ ಆದಿತ್ಯನು ಸರ್ವಾಪೇಕ್ಷಿ ರಥವನ್ನು, ಪಶು ಕನಕ ರತ್ನಾದಿ ಸಂಪತ್ತುಗಳನ್ನೂ ಪ್ರತಿದಿನವೂ ಮೂರು ಸವನಗಳಲ್ಲಿಯೂ ಒದಗಿಸಲಿ. ವಾಗ್ದೇವಿ ಸವಿತೃಗಳೂ ಧನ ಒದಗಿಸಲಿ.

## ಸೂಕ್ತ - 57 (ಪ್ರ ಮೇ ವಿವಿಕ್ವಾ ಅವಿದನ್ಮನೀಷಾಂ.......

ಋಷಿ ವಿಶ್ವಾಮಿತ್ರರು ವಿಶ್ವೇದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಸೋಮ ಹಿಂಡಲು ಸಿದ್ಧರಾಗಿರುವ ಯಜಮಾನರು ಶ್ರೇಷ್ಠರಸ ಹೊಂದಿರುವ ದ್ಯಾವಾಪೃಥ್ವಿಗಳನ್ನು ಸ್ತುತಿವಾಕ್ಕುಗಳಿಂದ ಸ್ತುತಿಸುತ್ತಾರೆ. ವಿವೇಕಿ ಇಂದ್ರ, ಅಗ್ನಿ, ಮತ್ತು ಇತರ ದೇವತೆಗಳು, ಯಜಮಾನನ ಸ್ತುತಿಗಳನ್ನು, ಅಧಿಕ ಹಾಲು ಕರೆಯುವ ಧೇನುವಿನಂತೆ ತಿಳಿಯಲಿ.

ಇಂದ್ರನು ವಸತಿದಾಯಕ, ವೃಷ್ಟಿಕಾರಕ. ಜಗತ್ ಪ್ರೀತಿಕಾರಕ ಓಷಧಿಗಳು ಇಂದ್ರನಿಂದ ವೃಷ್ಟಿಸೇಚನಕ್ಕಾಗಿ, ಗರ್ಭಾದಾನ ಸಾಮರ್ಥ್ಯ ಪಡೆದಿವೆ. ಶ್ರೇಷ್ಠ ಪಾಣಿಯ ಮಿತ್ರಾವರುಣರೂ ಪೂಷರೂ ವೃಷ್ಟಿ ಕರೆದಿದ್ದಾರೆ.

ಅಗ್ನಿಯು ಆಕರ್ಷಕ ಪ್ರಭೆಯುಳ್ಳವ, ಕರ್ತವ್ಯಜ್ಞಾನ ತಿಳಿದವ. ಉದಕಯುತ, ಶಕ್ತಿಯುತ, ನಾಲಿಗೆಯಿಂದ ದೇವಯಜ್ಞದಲ್ಲಿ ಪ್ರಕಾಶಿಸುತ್ತಾನೆ. ಜಾತಪ್ರಜ್ಞ ಪ್ರಕಾಶಮಾನ ವಸತಿಕಾರಕ ನಾನಾರೂಪಿ ಅಗ್ನಿಯು ಯಜಮಾನನಲ್ಲಿ ಸ್ಥಿರವಾಗಿರುವ ಅನುಗ್ರಹ ರೂಪಿ. ಮಾನವ ವ್ಯವಹಾರಾರ್ಥ ಪ್ರಸರಿಸುವವ.

ಅವನ ರಕ್ಷಣಾರ್ಥ, ಕೂಡಲಿ. ಸರ್ವರಿಗೂ ಹಿತಮಾಡುವ ಅಗ್ನಿಯ ಬುದ್ಧಿಯು ಯಜಮಾನನ ಪರವಾಗಿರಲಿ. ಯಜಮಾನರು ಸುಖಕರ ಫಲ ಹೊಂದಲಿ.

ಫಲಾಪೇಕ್ಷಿಗಳು, ಧಾನ್ಯಾದಿ ರೂಪಗಳನ್ನೂ, ಅನೇಕ ಪುತ್ರಾತ್ಮಕ ಫಲವನ್ನೂ ಪಡೆಯುತ್ತಾರೆ.

**ಸೂಕ್ತ - 58 (ಧೇನುಃ ಪ್ರತ್ನಸ್ಯ ಕಾಮ್ಯಂ ದುಹಾನಾಂತಃ........**

ಋಷಿ ವಿಶ್ವಾಮಿತ್ರರು ಅಶ್ವಿನೀದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಅಹಸ್ಸು, ಅಂತರಿಕ್ಷ ಸಂಚಾರಿ ಸೂರ್ಯನನ್ನು, ಧರಿಸುತ್ತದೆ. ಸೂರ್ಯನು ಜಗತ್ ಪ್ರೀತಿಕರ ಉಷಸ್ಸಿನ ಪುತ್ರ. ಉಷಸ್ಸಿಗಿಂತ ಮುಂಚೆ ಅವಿರ್ಭವಿಸುವ, ಅಶ್ವಿನೀದೇವತೆಗಳನ್ನು ಸ್ತುತಿಸಲು, ಯಜಮಾನ ಸ್ತುತಿಕರ್ತರು, ಎಚ್ಚರಗೊಳ್ಳುತ್ತಾರೆ.

ಅಶ್ವಿನೀದೇವತೆಗಳು, ಶ್ರೇಷ್ಠ ಸಮರ್ಥ ನಿತ್ಯತರುಣರು, ಧನವಂತರು, ಕರ್ಮನೇತೃಗಳು ಸತ್ಯಸ್ವರೂಪಿಗಳು, ಮಧುರ ಸೋಮಾಪೇಕ್ಷಿಗಳು, ಉತ್ತಮ ಸತ್ವವಂತರು. ಶ್ರೇಷ್ಠ ಧನ ದಾತೃಗಳು. ತೇಜಸ್ಸಿನಿಂದ ವ್ಯಾಪಿಸುವವರು. ನಾಶರಹಿತ ಶತ್ರುನಾಶಕರು.

ಅಶ್ವಿನೀದೇವತೆಗಳ ಸ್ನೇಹಪುರಾತನ; ಸೇವಿಸಲು ಯೋಗ್ಯ. ಕಲ್ಯಾಣ ಕಾರಕ, ಸುಖಸುಖಕರ. ಇವರು ದುಃಖಿತಪ್ತರ ಬಳಿಗೆ ಹೋಗುವರೆಂದು, ಮೇಧಾವಿ ಪುರಾತನ ಋಷಿಗಳು ಹೇಳಿದ್ದಾರೆ. ವಾಯು ಮತ್ತು ಅಶ್ವಗಳೊಂದಿಗೆ ಸೇರಿದ ಅಶ್ವಿನೀದೇವತೆಗಳ ಧನ ಜಹ್ನುವಿನ ಕುಲದಲ್ಲಿ ತುಂಬಿದೆ.

ಸ್ತೋತೃ ಯಜಮಾನರು ನಿಂದಾರಹಿತರು ಕರ್ಮಪ್ರವೃತ್ತರು. ಉತ್ತಮ ಸ್ತುತಿಕರ್ತರು, ಯಜ್ಞಕರ್ತರು, ಸೋಮ ಹಿಂಡುವವರು. ಇವರ ಸ್ತುತಿಯಿಂದ, ಆಕರ್ಷಕ ಅಶ್ವಿನೀದೇವತೆಗಳ ರಥವು ಪ್ರಭೂತ ತೇಜಸ್ವಿ ದ್ಯಾವಾಪೃಥ್ವಿವ್ಯಾಪಿ. ವೃಷ್ಟಿ ಉದಕ ಸುರಿಸುವುದು.

ಯಜ್ಞಕರ್ಮ ಭಾಗಿಗಳಾಗಲು, ದೇವಸಂಚಾರಿ ಮಾರ್ಗದಲ್ಲಿ, ಯಜಮಾನನ ಗೃಹಕ್ಕೆ ಅಶ್ವಿನೀದೇವತೆಗಳು ಬರಲಿ. ಅವರ ಗಮನ ಸಾಧಕ ಶ್ರೇಷ್ಠ ಅಶ್ವರಥ, ಯಜಮಾನಾಭಿಮುಖ ಯಜ್ಞಕ್ಕೆ, ಅವರನ್ನು, ಕರೆತರಲಿ.

ಪುರಾತನ ಅಗ್ನಿಗಾಗಿ, ಉಷಸ್ಸು ಪಯಸ್ಸನ್ನು ಕರೆಯುತ್ತದೆ. ಈ ಸೂರ್ಯೋದಯದ ವೇಳೆಗೆ ದಿನಾಂತ್ಯದಲ್ಲಿ ಹಿಂಡಿದ, ಪಾತ್ರೆಯಲ್ಲಿ ತುಂಬಿದ ಹಾಲುಮಿಶ್ರಿತ ಸಿದ್ಧಸೋಮ, ಹವಿರೂಪ ಅನ್ನವನ್ನೂ ಅಶ್ವಿನೀದೇವತೆಗಳಿಗೆ ಅರ್ಪಣೆಮಾಡಿ, ಯಜಮಾನನು ಇಬ್ಬರನ್ನೂ ಸಂತೋಷ ಗೊಳಿಸುತ್ತಾನೆ.

ಸ್ತುತಿಕರ್ತರ ಸ್ತುತಿಯನ್ನು ಅಶ್ವಿನೀದೇವತೆಗಳು ಕೇಳಲಿ. ಯಜಮಾನನ ದೃಷ್ಟ ಸಂಬಂಧವಾದ ಬುದ್ಧಿಯನ್ನು ಅಶ್ವಿನೀದೇವತೆಗಳು ನಾಶಮಾಡಲಿ.

## ಸೂಕ್ತ - 59 (ಮಿತ್ರೋ ಜನಾನ್ ಯಾತಯತಿ.......

ಋಷಿ ವಿಶ್ವಾಮಿತ್ರರು ಅಗ್ನಿನೀದೇವತೆಗಳನ್ನು ತ್ರಿಷ್ಟುಪ್ ಮತ್ತು ಗಾಯತ್ರೀ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಮಿತ್ರ ಅಂದರೆ ಸೂರ್ಯನು, ಸ್ತೋತ್ರತಮ ಮಿತ್ರರೂಪಿ. ದೇವತಾತ್ಮ ಶ್ರೇಷ್ಠ ಬಲಶಾಲಿ ಜಗತ್ ಸೃಷ್ಟಿಕರ್ತ. ಸಕಲ ಜಗದೊಡೆಯ, ಮಹತ್ವ ರೂಪಿ, ನಮಸ್ಕಾರಗಳಿಂದ ಸಮೀಪಿಸಲ್ಪಡುವವ, ಸುಖದಿಂದ ಸೇವಿಸಲ್ಪಡುವವ, ಜನರನ್ನು ಅವರವರ ಕರ್ಮಕ್ಕೆ ಪ್ರೇರೇಪಿಸುವವ, ಸ್ತುತಿಕರ್ತ ಯಜಮಾನನಿಗಾಗಿ ಸುಖಕಾರಕ.

ಸೂರ್ಯನು ದ್ಯುಲೋಕವನ್ನೂ, ಪೃಥ್ವಿಯನ್ನೂ, ಧರಿಸಿದವ. ಸ್ತೋತ್ರಗಳಿಂದ ಸ್ತುತಿತ. ಅನುಗ್ರಹ ದೃಷ್ಟಿಯವ, ಪ್ರಜೆಗಳನ್ನು ನೋಡುವವ, ವೃಷ್ಟಿಯುತ ದಾನದಿಂದ ಸಕಲ ಪ್ರಜೆಗಳನ್ನೂ ಧರಿಸಿದವ.

ಮಿತ್ರನು ಅನ್ನದಿಂದ ಪೃಥ್ವಿಯನ್ನೂ, ಅತಿಶಯ ಕೀರ್ತಿಯಿಂದ ಅಂತರಿಕ್ಷವನ್ನೂ, ವ್ಯಾಪಿಸಿದ್ದಾನೆ. ಸಕಲ ದೇವತೆಗಳನ್ನೂ, ತನ್ನ ಸ್ವರೂಪದಿಂದಲೇ ಧರಿಸಿದ್ದಾನೆ.

ಮಿತ್ರರಕ್ಷಿತಪುರುಷನು, ಯಾರಿಂದಲೂ ಹಿಂಸಿತನಾಗನು; ಜಯಿಸಲ್ಪಡನು. ಅಂತಹ ಪುರುಷನ ಬಳಿ ಪಾಪವು ಸೇರುವುದಿಲ್ಲ. ದೂರದಲ್ಲೂ ಇರುವುದಿಲ್ಲ.

ಪ್ರಕಾಶಮಾನವಾದ ಗುಣಗಳ ಕರ್ಮಾಚರಣೆಗೆ, ಸಿದ್ಧವಾದ ಮಾನವರ ಯಜಮಾನರಲ್ಲಿ, ಯೋಗ್ಯ ಅನ್ನ ಉತ್ಪತ್ತಿ ಮಾಡುತ್ತಾನೆ. ನಿಷಾದಾದಿ ಪಂಚ ವರ್ಣಾತ್ಮಕರು ಶತ್ರುನಾಶಕ ಶಕ್ತಿಯ ಮಿತ್ರನನ್ನು, ಹವಿಸ್ಸಿನಿಂದ ಸ್ತುತಿಸುತ್ತಾರೆ. ಆದಿತ್ಯನಿಗೆ ಯೋಗ್ಯ ಹವಿಸ್ಸು ಅರ್ಪಿಸುತ್ತಾರೆ.

ಯಜ್ಞಯುಕ್ತ ಋತ್ವಿಕ ಮಾನವ ಆದಿತ್ಯನನ್ನು ಉದ್ದೇಶಿಸಿ ಘೃತಯುಕ್ತ ಹವಿರೂಪ ಆಹುತಿ ಅನ್ನಅರ್ಪಿಸಲಿ. ಆದಿತ್ಯೋದ್ದೇಶಿತ ಕರ್ಮ ನೆರವೇರಿಸುವವರು ರೋಗರಹಿತರಾಗಿ ಅನ್ನತೃಪ್ತರಾಗಿ ವಿಸ್ತೃತ ಪೃಥ್ವಿಯಲ್ಲಿ ಸ್ವತಂತ್ರ್ಯ ಸಂಚಾರಿಯಾಗಿ ಇರುವಂತಾಗಲಿ. ಆದಿತ್ಯನ ಕಲ್ಯಾಣಾತ್ಮಕ ಅನುಗ್ರಹ ಬುದ್ಧಿಯಲ್ಲಿ, ಯಜಮಾನನು ಇರಲಿ, ಅನ್ನವಂತನಾಗಲಿ.

## ಸೂಕ್ತ - 60 (ಇಹೇಹ ವೋ ಮನಸಾ ಬಂಧುತಾ.........

ಋಷಿ ವಿಶ್ವಾಮಿತ್ರರು ಋಭುವಃ ಮತ್ತು ಇಂದ್ರದೇವತೆಗಳನ್ನು ಜಗತೀ ಛಂದಸ್ಸಿನ ಋಕ್‌ಗಳಲ್ಲಿಸ್ತುತಿಸುತ್ತಾರೆ.

ಋಭುಗಳು, ಆಂಗೀರಸ ಸುಧನ್ವರ ಪುತ್ರರು. ಮೇಧಾವಿಗಳು ಉತ್ತಮ ಕರ್ತವ್ಯ ಜ್ಞಾನಿಗಳು, ಕರ್ಮಕುಶಲರು, ಯುಗಾದಿಶ್ರೇಷ್ಠ ಕರ್ಮಕರ್ತರು. ವ್ಯವಹಾರದಿಂದ ಸರ್ವತ್ರ ವ್ಯಾಪಿಗಳು, ಅಗ್ನಿಯುಕ್ತರು, ಯಜ್ಞಭಾಗ ಅಪೇಕ್ಷಿತರು. ಇಂದ್ರ ಸಖರಾದ್ದರಿಂದಲೇ ಮರಣರಾಹಿತ್ಯ ಪಡೆದವರು.

ಋಭುಗಳು ಕರ್ಮಜ್ಞಾನದಿಂದ ಉತ್ತಮ ಅರ್ಥಜ್ಞಾನ ಸೃಷ್ಟಿಸಿ, ಶತ್ರುನಾಶಕವಾದ ತೇಜಸ್ವಿ ಯಜ್ಞಾರ್ಹ ಸೋಮಪಡೆದಿದ್ದಾರೆ. ಇವರ ಪ್ರಜ್ಞೆಯಿಂದಲೇ, ಒಂದು ಚಮಸ ಪಾತ್ರೆ ನಾಲ್ಕಾದದ್ದು, ಗೋಚರ್ಮ ಹೊದಿಸಿದ, ಮೃತಗೋವು ಜೀವಂತವಾದದ್ದು, ಇಂದ್ರನಕುದುರೆಯು ನಿರ್ಮಾಣವಾದದ್ದು, ಸ್ವಸಾಮರ್ಥ್ಯದಿಂದಲೇ ದೇವತ್ವ ಪಡೆದ ಮಾನವರಿವರು. ಇವರ ಶೋಭನಾತ್ಮಕ ಪರಾಕ್ರಮಗಳ ಅಳತೆ ಸಾಧ್ಯವಿಲ್ಲ.

ಇಂದ್ರನು ಧನವಂತ, ಅನ್ನಯುಕ್ತ ಅನೇಕರಿಂದ ಸ್ತುತಿತ, ಸ್ತುತಿಯಿಂದ ಕರ್ಮ ಪ್ರೇರಿತ ಇಂದ್ರ ತೃಪ್ತ್ಯರ್ಥವಾಗಿಯೇ ಅಪಸ್ಸು ನಿರ್ಮಾಣ, ಪುನರಾವರ್ತನೆ ಆಗುತ್ತದೆ. ಮಾನವ ಕರ್ಮಗಳೊಡನೆ, ಸೇರಿಕೊಳ್ಳುತ್ತದೆ.

ಇಂದ್ರನು ಋಭುಗಳೊಡನೆ, ತೃತೀಯ ಸವನದಲ್ಲಿ ಯಜಮಾನನ ಮನೆಯಲ್ಲಿ ಎರಡೂ ಕೈಗಳಲ್ಲಿ, ಸೋಮ ಕುಡಿದು, ತೃಪ್ತನಾಗಲಿ. ಋಭುಗಳು ಒಂದೇ ರಥದಲ್ಲಿ ಇಂದ್ರನೊಡನೆ ಬಂದು ಸೋಮ ಪಾನಮಾಡಲಿ. ಮಾನವರ ಸ್ತುತ್ಯಾದಿ ಕರ್ಮಗಳೊಡನೆ ಸೇರಿಕೊಳ್ಳಲಿ.

ಇಂದ್ರನು, ಋಭುಗಳು, ಪ್ರಾಜ್ಞ ಮರುತ್ತುಗಳು, ಶತಸಂಖ್ಯಾತ ಅಶ್ವಗಳೊಡನೆ ಸ್ತುತಿಕರ್ತ ಯಜಮಾನನಿಗೆ ಬಹುಅನ್ನ ಉತ್ಪತ್ತಿ ಮಾಡಿಕೊಡಲಿ; ಗೋತ್ರೋಪದೇಶ ಮಾಡಲಿ. ಹಿಂಸಾರಹಿತ ಸೋಮ ಹೋಮದಲ್ಲಿ ಇರುವವನಾಗಲಿ.

## ಸೂಕ್ತ - 61 (ಉಷೋ ವಾಜೇನ ವಾಜಿನಿ ಪ್ರಚೇತಾಃ......

ಋಷಿ ವಿಶ್ವಾಮಿತ್ರರು ಉಷಾದೇವತೆಯನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಉಷೋದೇವಿಯು ಆದಿತ್ಯನ ಪತ್ನಿ, ದೇವತಾತ್ಮಳು, ಸೌಭಾಗ್ಯಯುಕ್ತಳು, ಮಾಧುರ್ಯ ನಿಧಿ, ಉತ್ಕೃಷ್ಟ ಪ್ರಜ್ಞೆಯುಳ್ಳವಳು, ಪ್ರಿಯವಾಕ್ಕು ಉಳ್ಳವಳು, ರಮಣೀಯದರ್ಶನ ಉಳ್ಳವಳು, ಸಮಸ್ತ ಪ್ರಪಂಚ ಜ್ಞಾನಿ ಸುವರ್ಣರೂಪಿ, ಸುವರ್ಣಮಯ ರಥವವಳು, ಮರಣಧರ್ಮ ರಹಿತಳು, ಪುರಾತನಳು, ನಿತ್ಯತರುಣಿ, ಶ್ರೇಷ್ಠಕರ್ಮ ಸಹಾಯಕಳು, ಅನ್ನ ಸಂಪದ್ಯುಕ್ತಳು, ಧನಯುಕ್ತಳು, ಕಾಂತಿಯುಕ್ತಳು, ಸತ್ಯವಂತೆ, ಊರ್ಧ್ವಮುಖಿ ತೇಜಸ್ವಿನಿ, ಅನೇಕರ ಸ್ತುತಿಗೆ ಪಾತ್ರಳು, ಸರ್ವರಿಂದಲೂ ಆದೃತಳು.

ಉಷೋದೇವಿಯು, ತನ್ನ ತೇಜಸ್ಸಿನಿಂದ ಸರ್ವರಿಂದಲೂ ತಿಳಿಯಲ್ಪಡುತ್ತಾಳೆ. ಪ್ರತಿದಿನವೂ ನೂತನವಾಗಿ ಉದಯಿಸುತ್ತಾ, ವಸ್ತ್ರದಂತೆ ಹರಡಿರುವ ಅಂಧಕಾರವನ್ನು, ನಾಶಮಾಡುತ್ತಾಳೆ. ಒಂದೇ ಮಾರ್ಗದಲ್ಲಿ ಚಕ್ರದಂತೆ ಸುತ್ತುತ್ತಾ, ಪುನರಾವೃತ್ತ ಸಂಚಾರ ಉಳ್ಳವಳಾಗಿದ್ದಾಳೆ. ದ್ಯುಲೋಕಾಂತ್ಯದಿಂದ, ಪೃಥ್ವಿಯ ಅಂತ್ಯದವರೆಗೆ ಪ್ರಸಿದ್ಧಳಾಗಿದ್ದಾಳೆ.

ವೃಷ್ಟಿಕಾರಕ ಆದಿತ್ಯನು ಅಪಸ್ಸಿನ ಮೂಲ ಭಾಗದಲ್ಲಿ ಉಷಸ್ಸುಗಳ ಆವಿರ್ಭಾವಕ್ಕೆ ಪ್ರೇರಿಸುತ್ತಾನೆ. ಮರಣಧರ್ಮರಹಿತ ಆದಿತ್ಯನಿಗೆ ಉಷೆಯು ಪ್ರಾಜ್ಞಪತ್ನಿಯಾಗಿ ಅಂತರಿಕ್ಷದಲ್ಲಿದ್ದಾಳೆ. ಅಗ್ನಿಯು, ಹವಿಸ್ಸಿಗಾಗಿ ಪ್ರಾರ್ಥಿಸಿ, ಅಗ್ನಿ ಹೋತ್ರಾದಿ ರೂಪ ಧನ ಪಡೆಯುತ್ತಾನೆ.

ಉಷೆಯು, ದ್ಯಾವಾಪೃಥ್ವಿಗಳು ಅನೇಕ ವಿಧರೂಪ ಇರುವಂತೆ ಮಾಡಿ, ವ್ಯಾಪಿಸಿದ್ದಾಳೆ. ಮಿತ್ರಾವರುಣರಿಗೆ ಪ್ರಭಾರೂಪಳಾಗಿ ಸುವರ್ಣ ಕಾಂತಿ ಹರಡುತ್ತಾ ಬಹುಪ್ರದೇಶಗಳಲ್ಲಿ ತನ್ನ ಪ್ರಭೆ ಪ್ರಸರಿಸುತ್ತಾಳೆ.

ಉಷೋದೇವಿಯನ್ನು ಪ್ರಭೂತ ಅಶ್ವಗಳು ರಥಕ್ಕೆ ಯೋಜಿತವಾಗಿ ವಹಿಸಲಿ. ಸ್ತೋತೃಗಳು ನಮಸ್ಕಾರ ಪೂರ್ವಕವಾಗಿ ಶ್ರೇಷ್ಠ ಸ್ತುತಿ ನಿರ್ಮಿಸಿ ಅಭಿಮುಖ ಪ್ರಕಾಶಿಸಿ ಉಷೆಗೆ ಅರ್ಪಿಸಲಿ. ಸ್ತುತಿಕರ್ತರನ್ನು ಸೇವಿಸಿ ಉಷೋದೇವಿಯು, ಯಜ್ಞಕರ್ಮಕ್ಕೆ ಅನುಗ್ರಹಿಸಲಿ.

## ಸೂಕ್ತ - 62 (ಇಮಾ ಉ ವಾಂ ಭೃಮಯೋ ಮನ್ಯಮಾನಾ......

ಋಷಿ ವಿಶ್ವಾಮಿತ್ರ ಮತ್ತು ಜಮದಗ್ನಿಗಳು, ಇಂದ್ರಾ, ವರುಣ, ಬೃಹಸ್ಪತಿ, ಪೂಷಾ, ಸವಿತಾ, ಸೋಮ, ಮಿತ್ರಾವರುಣ ದೇವತೆಗಳನ್ನು, ತ್ರಿಷ್ಟುಪ್ ಮತ್ತು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರಾವರುಣರು ತಮ್ಮ ಯಶಸ್ಸಿನಿಂದ, ತಮ್ಮ ಸಖರಿಗೆ ಅನ್ನಸಂಪಾದಿಸಿ ಕೊಡುವ ಕೀರ್ತಿವಂತರು. ಇವರನ್ನು, ಯಜಮಾನರು ರಕ್ಷಣಾರ್ಥ ಕರೆಯುತ್ತಾರೆ. ಇವರಿಗೆ ಸೇರಿದ ಯುವಕರು ಶತ್ರುಗಳಿಂದ ಓಡಿ ಹಿಂಸಿತರಾಗದಿರಲಿ.

ಮರುತ್ತುಗಳು, ಸರ್ವಸಮರ್ಥ ದ್ಯುಲ್ಲೋಕ ದೇವತೆಗಳು; ಪೃಥ್ವಿಯೊಂದಿಗೆ ಸೇರಿಕೊಂಡು ಇರುವ ಸಮರ್ಥರು. ಇವರು ಕರ್ಮಾಚರಣೆಯಿಂದ ಧನಾರ್ಥಿಯಾದ ಯಜಮಾನನ ಸ್ತುತಿ ಆಹ್ವಾನ ಕೇಳಲಿ. ಯಜಮಾನರಿಗೆ, ಮರುತ್ತುಗಳು, ಇಷ್ಟಪಟ್ಟ ವಾಸಯೋಗ್ಯ ಗೃಹ, ಪುತ್ರ ಪೌತ್ರರನ್ನೂ ಧನವನ್ನೂ ಒದಗಿಸಲಿ.

ವಾಗ್ದೇವಿ ಸರಸ್ವತಿಯು ಗೋಸಂಪತ್ತು ಅಥವಾ ವಾಕ್‌ಸಂಪತ್ತುಗಳಿಂದ, ಯಜಮಾನನನ್ನು ರಕ್ಷಿಸಲಿ. ಬೃಹಸ್ಪತಿಯು ಶುದ್ಧ, ಮಾನವರ ಇಷ್ಟಾರ್ಥಪ್ರದ, ಬಹುರೂಪಿ, ಯಾರಿಂದಲೂ ತಿರಸ್ಕರಿಸಲ್ಪಡದವ, ಎಲ್ಲರಿಂದಲೂ ಪೂಜ್ಯ, ಸಕಲ ಮಾನವರಿಗೂ ಮಂಗಳಕರ, ಬೃಹಸ್ಪತಿಯನ್ನು ಋತ್ವಿಜರು ಪೂಜ್ಯ ಸ್ತುತಿಯಿಂದ ಪೂಜಿಸುತ್ತಾರೆ. ಹವಿಸ್ಸನ್ನು ಸೇವಿಸಿ ಯಜಮಾನರಿಗೆ ಧನ, ಶತ್ರುಗಳನ್ನು ಕುಗ್ಗಿಸಲು ಸಾಧ್ಯವಾದ ಶಕ್ತಿಯನ್ನು ಯಜಮಾನನಿಗೆ ಕೊಡಲಿ.

ಪೂಷನು ಪ್ರಕಾಶಮಾನಿ, ಸಕಲಲೋಕವನ್ನೂ ಸೂಕ್ಷ್ಮವಾಗಿ ವೀಕ್ಷಿಸುವವ, ವಸ್ತುಗಳ ಯಥಾರ್ಥಸೂಕ್ಷ್ಮ ತಿಳಿದವ, ಪೂಷನನ್ನು ಉದ್ದೇಶಿಸಿದ ಸ್ತುತಿವಾಕ್ಯಗಳನ್ನು ಪೂಷನು ಸ್ವೀಕರಿಸಿ, ಸ್ತುತಿಕರ ಅಭಿಮುಖ ಬಂದು ರಕ್ಷಕನಾಗಿರಲಿ.

ಸವಿತೃವು, ದೇವತಾತ್ಮ ಪ್ರಕಾಶಮಾನ, ಕರ್ಮವಿಷಯ ಪ್ರಜ್ಞೆ ಪ್ರೇರಿಸುತ್ತಾನೆ. ಅಧ್ವರ್ಯು ಯಜಮಾನರು, ಯಾಗಾರ್ಹ ಹವಿಸ್ಸುಗಳಿಂದ ಶ್ರೇಷ್ಠ ವಸ್ತುಗಳಿಂದ ಸೇವಿಸುತ್ತಾರೆ. ವಿಶ್ವ ಪೂಜ್ಯ ಜ್ಯೋತಿಯನ್ನು ಧ್ಯಾನಿಸುತ್ತಾರೆ. ಪ್ರಕಾಶಮಾನ ಸವಿತೃವಿನ ಪ್ರಜ್ಞೆಯಿಂದ ಅನ್ನ ಪೂಜ್ಯಧನ ದಾನವನ್ನು, ಯಜಮಾನನು, ಯಾಚಿಸುತ್ತಾನೆ.

ಸೋಮವು ತನ್ನ ಗಂತವ್ಯ ಅರಿತು, ಸುಸಂಸ್ಕೃತ ಯಜ್ಞವೇದಿಕೆ ಸೇರಿ, ಹವಿರೂಪದಿಂದ ದೇವಾರ್ಪಿತವಾಗುತ್ತದೆ. ಯಜಮಾನನ ಆಯುಸ್ಸು ವೃದ್ಧಿಸುತ್ತಾ, ಹಿಂಸಕ ಶತ್ರುಗಳನ್ನು ಹೊಡೆದೋಡಿಸುತ್ತಾ, ಸೋಮನು ಯಜ್ಞವೇದಿಕೆಗೆ ಬಂದು ಕೂಡಲಿ. ಯಜಮಾನನಿಗೂ, ಅವನ ಪುತ್ರರಿಗೂ, ಅವನ ಚತುಷ್ಪಾದ ಪಶುಗಳಿಗೂ, ರೋಗ ರಹಿತ ಅನ್ನ ಒದಗಿಸಲಿ.

ಜಮದಗ್ನಿ ಸ್ತುತಿತ ಮಿತ್ರಾವರುಣರು ಪರಿಶುದ್ಧ ಕಾರ್ಯ ಉಳ್ಳವರು. ಅನೇಕರಿಂದ ಪ್ರಶಂಸಿತರಾದವರು, ಹವಿಸ್ಸಿನಿಂದ ವೃದ್ಧಿಹೊಂದಿದ ಶ್ರೇಷ್ಠ ಕರ್ಮಕರ್ತರು. ದೀರ್ಘ ಸ್ತುತಿಯಿಂದ ಕೂಡಿದವರು, ಶಕ್ತಿ ಸಂಪತ್ತಿನಿಂದ ಪ್ರಕಾಶಿತರು.

ಯಜಮಾನನ ಗೃಹಗಳನ್ನು ಗೋವುಗಳಿಂದ ಕ್ಷೀರಾದಿಗಳಿಂದ ತುಂಬಲಿ. ಲೋಕವನ್ನು ಮಧುರ ರಸದಿಂದ ತುಂಬಲಿ. ಯಜ್ಞವೇದಿಕೆಯಲ್ಲಿ ಕುಳಿತು ಯಜ್ಞವರ್ಧಕರಾಗಿ ಸೋಮಪಾನ ಮಾಡಲಿ.

...........................

## ಋಗ್ವೇದ ಪರಿಚಯ - ಮಂಡಲ - 4
## (ಸೂಕ್ತಗಳು 1 ರಿಂದ 58 ರವರೆಗೆ)

### (ಅಷ್ಟಕ - 3, ಅಧ್ಯಾಯ - 4 ಮುಂದುವರೆದದ್ದು ಅಧ್ಯಾಯ 8 ಭಾಗಶಃವರೆಗೆ)

**ಸೂಕ್ತ - 1 (ತ್ವಾಂ ಹ್ಯಗ್ನೇ ಸದಮಿತ್ಸಮನ್ಯವೋ.....**

ಋಷಿ ವಾಮದೇವರು ಅಗ್ನಿ ವರುಣ ದೇವತೆಗಳನ್ನು ಅಷ್ಟಿ ಅತೀಜಗತೀ ಧೃತಿ ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಕರ್ಮ ವಿಷಯ ಜ್ಞಾನಿ. ಅಂತರಿಕ್ಷ ಮಧ್ಯ ತೇಜಸ್ವಿ. ದೇವತೆಗಳನ್ನು ಯಜ್ಞಕ್ಕೆ ಕರೆತರುವವ. ಯಜ್ಞಕ್ಕೆ ಬಂಧುರೂಪ.

ಯಜಮಾನರು ಸ್ತುತಿಗಳಿಂದ ಕರ್ಮಗಳಿಂದ ಅಗ್ನಿಯನ್ನೂ, ದೇವತೆಗಳನ್ನೂ ಪ್ರೇರೇಪಿಸುತ್ತಾರೆ. 'ಅಗ್ನಿಯು ಯಜ್ಞಮಾಡತಕ್ಕ ಮಾನವರಲ್ಲಿ ಇದ್ದಾನೆ' – ಎಂದು ದೇವತೆಗಳು ತಿಳಿದಿದ್ದಾರೆ. ಅಗ್ನಿಯು ಶಿರವನ್ನೂ ಪಾದಗಳನ್ನೂ ಗೂಢವಾದ ಧೂಮದಲ್ಲಿ, ಅಂತರಿಕ್ಷದಲ್ಲಿ ಐಕ್ಯಮಾಡಿದ್ದಾನೆ.

ಪಿತೃಪಿತಾಮಹಾದಿ ಆಂಗೀರಸರು, ಯಜ್ಞಸ್ಥಾಪಿಸಿ ಅಗ್ನಿಯನ್ನು ಪೂಜಿಸಿದುದರ ಫಲವಾಗಿ, ಪರ್ವತಗುಹೆಯಲ್ಲಿ ತಡೆಹಿಡಿದಿದ್ದ ಗೋವುಗಳು ಹೊರಬಂದವು. ಇತರ ಋಷಿಗಳು ಅಗ್ನಿಯನ್ನು ಉಪಚರಿಸಿ, ಆದಿತ್ಯ–ತಮ ಜ್ಯೋತಿ ಪಡೆದು, ಯಜ್ಞಕರ್ಮ ನೆರವೇರಿಸಿದರು.

ದ್ಯುಲ್ಲೋಕವು ಅಗ್ನಿಗೆ ಜನಕವೂ ಪಾಲಕವೂ ಆಯಿತು. ಅಗ್ನಿ, ವಾಯು, ಸೂರ್ಯ ಇವರುಗಳು ಉತ್ಪತ್ತಿಸ್ವರೂಪ ದೇವತಾತ್ಮರಾದರು.

ಆಂಗಿರಸ್ಸುಗಳು, ಉಷಃಸ್ಸನ್ನು ಆಹವನೀಯ ಶಬ್ದಗಳಿಂದ, ನಂತರ ಛಂದಸ್ಸುಗಳಿಂದ ಸ್ತುತಿಸಿದಾಗ, ಹೊಂಬಣ್ಣದ ತೇಜಸ್ಸು ಉದಯವಾಗಿ, ಉಷಃಸ್ಸಿನಿಂದ ಕತ್ತಲುನಾಶವಾಗಿ, ಅಂತರಿಕ್ಷ ಪ್ರಕಾಶಮಾನವಾಗಿ, ಜರಾರಹಿತ ಆದಿತ್ಯನ ಉದಯವಾಗಿ, ಮಾನವರ ಸತ್ಯಾತ್ಮಕ ಕರ್ಮ ಪ್ರಕಾಶವಾಯಿತು.

ಕರ್ಮ ಪ್ರವೃತ್ತ ಮಾನವರು, ಅಗ್ನಿಯನ್ನು ಆಹ್ವಾನಿಸಿ ವಿಶ್ವವ್ಯಾಪಿ ಮಾಡಿದರು. ಸಪ್ತ ಹೋತೃಗಳು ಸ್ತುತಿನಿರ್ಮಿಸಿದರು, ಅಧ್ವರ್ಯುಗಳು ಘೃತದಿಂದ ಪೋಷಿಸಿದರು. ಅಗ್ನಿಯು ಇವರಲ್ಲೇ ಐಕ್ಯನಾಗಿ, ಇವರ ಇಷ್ಟಾರ್ಥಸಾಧಿಸುತ್ತಾನೆ. ಸಮಸ್ತ ಯಜ್ಞಗೃಹಗಳನ್ನೂ ಅಪೇಕ್ಷಿಸುತ್ತಾನೆ.

ಮಾನವ ಅತಿಥಿಯಂತೆ, ಯಜ್ಞಾರ್ಹ ದೇವತೆಗಳಿಗೆ ದೇವ ಮಾತೆಯಂತೆ ಇದ್ದು, ಅಗ್ನಿಯು ಹವಿರೂಪ ಅನ್ನ ಸ್ವೀಕರಿಸುತ್ತಾನೆ. ಯಜಮಾನನಿಗೆ ಸುಖತರುತ್ತಾನೆ. ದೇವತೆಗಳಿಗೆ ಹವಿರ್ವಾಹಕ ಕರ್ಮನಿರತ ಧೂತನಾಗಿರುತ್ತಾನೆ.

ದರಿದ್ರ ಯಜಮಾನನು, ಕ್ಷೀರವನ್ನಾಗಲೀ ಸೋಮವನ್ನಾಗಲೀ, ಅರ್ಪಿಸಲಿಲ್ಲ. ಸ್ತುತಿ ಮಾತ್ರಾ ಅರ್ಪಿಸುತ್ತಾನೆ. ಅಗ್ನಿಯು ಯಜ್ಞಗೃಹಕ್ಕೆ ದಯಮಾಡಲಿ. ಉಷಃಕಾಲದಲ್ಲಿ ಸಾನ್ನಿಧ್ಯಕೊಡಲಿ. ರಕ್ಷಣೆ ಧನಸಂಪತ್ತುಗಳನ್ನು ಕ್ಷಿಪ್ರವಾಗಿ ತಂದುಕೊಡಲಿ. ಪ್ರಶಸ್ತ ಕ್ಷೀರ

[illegible]

ಮಿತ್ರಾವರುಣರ ಅನುಗ್ರಹದಿಂದ, ಸ್ತುತಿಕರ್ತ ಯಜಮಾನರಿಗೆ ಸತ್ಪಾತ್ರಕ ಜೀವನ ಉಂಟಾಗಲಿ. ವರುಣನು ಅಗ್ನಿಯ ಭ್ರಾತೃರೂಪ. ಹವಿಪ್ರೂಜಿತ ಯಜ್ಞಭಾಗಿ, ಪ್ರಶಸ್ತ, ಸತ್ಪಾತ್ರಕ, ಅದಿತಿ ಪುತ್ರ. ಮಾನವಧಾರಕ ಸಖೀಭೂತ, ಮಾನವರ ಮನಸ್ಸು ಬುದ್ಧಿಯಲ್ಲಿ ಧ್ಯಾನಾತ್ಮಕ, ಐಶ್ವರ್ಯ ಪ್ರಭುಗಳು ವರುಣನೊಂದಿಗೆ, ಸರ್ವವ್ಯಾಪಕ ತೇಜಸ್ವಿ ಮರುತ್ತುಗಳೊಂದಿಗೆ, ಅಗ್ನಿಯು ಸುಖಕರ, ಹವಿಸ್ಸು ಹೊಂದಿದ್ದಾನೆ.

ಅಗ್ನಿಯು ವರುಣನನ್ನು ಯಜಮಾನನ ಪ್ರಯೋಜನಕ್ಕೆ ಸ್ತೋತ್ರಾಭಿಮುಖ ಕರೆತರಲಿ. ವರುಣನ ಕ್ರೋಧವನ್ನು ಯಜಮಾನನಿಂದ ದೂರಮಾಡಲಿ. ಸಮಸ್ತ ಪಾಶಗಳನ್ನೂ ಬಿಡಿಸಿ ನಾಶಮಾಡಲಿ, ವರುಣಕೃತ ರೋಗವನ್ನು ನಾಶಮಾಡಲಿ.

**ಸೂಕ್ತ 2 ( ಯೋ ಮರ್ತ್ಯೇಷ್ವಮೃತ.....**

ಋಷಿ ವಾಮದೇವರು ಅಗ್ನಿ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಇಂದ್ರಾದಿ ದೇವತೆಗಳ ಹಾಗೂ ಮಾನವರ ಔನ್ನತ್ಯಕ್ಕಾಗಿ ಉತ್ತರವೇದಿಕೆಯಲ್ಲಿ ಸ್ಥಾಪಿತನಾಗಿದ್ದಾನೆ. ಪೂಜ್ಯ ಯಜ್ಞದಲ್ಲಿ ಪೂಜನೀಯ ದೇವತೆಗಳ ಮತ್ತು ಪೂಜಕ ಮಾನವರ ನಡುವೆ ಅಗ್ನಿಯು, ಹವಿರ್ವಾಹಕನಾಗಿದ್ದಾನೆ. ಮನೋವೇಗ ಸಂಚಾರಿಗಳಾದ, ಅಲಂಕೃತ, ಪುಷ್ಟ ರೋಹಿತವರ್ಣದ, ಅಶ್ವಹೂಡಿದ ರಥದಲ್ಲಿ, ಅಗ್ನಿಯು ಹವಿಸ್ಸುಸ್ವೀಕರಿಸಿ ಹಂಚಲು ಬರುತ್ತಾನೆ. ಇದಕ್ಕಾಗಿ ಕ್ರಾಂತಿಕಾರಿ ಋಷಿಗಳಿಂದ ಆಹ್ವಾನ ಪಡೆದಿದ್ದಾನೆ.

ಯಜ್ಞಾರ್ಹ ದೇವತೆಗಳಿಗೆ, ದೇವಮಾತೆಯಂತಿರುವ ಅಗ್ನಿಯು, ಮಾನವರ ಅತಿಥಿ; ಹವಿರೂಪ ಅನ್ನಾಪೇಕ್ಷಿ, ಹವಿಸ್ಸಿಂದ ಪ್ರಜ್ವಲಿತ.

ಆದಿತ್ಯಪುತ್ರ ಆಂಗೀರಸರು, ಉಷಸ್ಸಿಂದ ಅಗ್ನಿರಶ್ಮಿ ಉತ್ಪನ್ನ ಮಾಡಿದರು. ಯಾಗಾದಿಗಳಿಂದ ಮಾನವ ಜನ್ಮ ಸಂಸ್ಕಾರಗೊಳ್ಳಲು ಅಪೇಕ್ಷಿಸಿದಾಗ, ಅಗ್ನಿಯು ಸೇವಾಕಾರ್ಯಕ್ಕೆ ಸಿದ್ಧನಾಗುತ್ತಾನೆ.

ಅಂಗೀರಸ್ಸುಗಳ ಜನನೀರೂಪ ಶಬ್ದಗಳು ಹಾಗೂ ಛಂದಸ್ಸುಗಳಿಂದ, ಉಷಃ ಪ್ರಾರ್ಥನೆಯಿಂದ, ಹೊಂಬಣ್ಣದ ತೇಜೋದಯವಾಗಿ, ಅಂತರಿಕ್ಷ ಪ್ರಕಾಶವಾಯಿತು. ಜರಾರಹಿತ ಆದಿತ್ಯನ ಉದಯವಾಗಿ, ಮಾನವರ ಸತ್ಯ, ಅಸತ್ಯ ಕರ್ಮಗಳನ್ನೂ, ಮೋಸಗಳನ್ನೂ, ಆದಿತ್ಯನು ವೀಕ್ಷಿಸುವಂತಾಯಿತು.

ಅಗ್ನಿಪ್ರಕಾಶಿಸಿ, ಇಂದ್ರನನ್ನು ಪ್ರವೃದ್ಧಗೊಳಿಸಿ, ಅಪಹೃತ ಗೋವುಗಳನ್ನೂ ಅಂಗೀರಸರು ಗಳಿಸಿದರು. ನಂತರ ಯಜ್ಞಗೃಹ ಸೇರಿ, ಭೃತ್ಯ ಪುತ್ರ ಪೌತ್ರರನ್ನು ಪೋಷಿಸಲು ಸಮರ್ಥರಾದರು.

ಶ್ರೇಷ್ಠ ಅಶ್ವರಥಸಂಪದ್ಯುಕ್ತ ಅಗ್ನಿಯು, ಹವಿರೂಪ ಅನ್ನ ಸೇವಿಸಿದಾಗ ತೇಜಸ್ವಿಯಾಗಿ ಯಜಮಾನನು ಸುಪ್ರೀತನಾಗುತ್ತಾನೆ.

ಯಜಮಾನರು ಶ್ರೇಷ್ಠ ಕರ್ಮಕರ್ತರು, ಕಾಂತಿಯುತರು, ದೇವತಾತ್ಮರು, ದೇವತಾಪೇಕ್ಷಿಗಳು. ಉತ್ತಮ ಯಜಮಾನಯುಕ್ತ, ಗೋವು ಆಡು ಅಶ್ವ ಅಹಿಂಸಕ ಅನ್ನಯುಕ್ತ ಯಾಗವು,

ಪ್ರಶಂಸಿತ ಹವಿರರ್ಪಿತವಾಗಿ, ವಿಘ್ನವಿಲ್ಲದೇ ಮುಂದುವರೆಯಲಿ. ವಿಧ್ಯುಕ್ತ ಸತ್ಯಭೂತ ಯಜ್ಞದಿಂದ ಯಜಮಾನರು ತೇಜೋಮಯರಾಗಿ, ಸಂಪದ್ಯುಕ್ತ, ಸಭಾಯುಕ್ತ, ಧನಯುಕ್ತ, ಪುತ್ರಪೌತ್ರಯುಕ್ತರಾಗಲಿ.

ಕ್ಷೀರ, ಸೋಮಗಳನ್ನು ಅರ್ಪಿಸಲಾಗದ, ದರಿದ್ರ ಯಜಮಾನನ, ಸ್ತೋತ್ರರೂಪ ಹವಿಸ್ಸನ್ನೇ ಅಗ್ನಿಯು ಸೇವಿಸಿ, ಅವನಿಗೆ ಸುಖಕರನಾಗಲಿ.

ಉತ್ತಮ ಹವಿಸ್ಸು ಪಡೆಯಲು, ಆರ್ಯಮ, ವರುಣ, ಇಂದ್ರ, ಮಿತ್ರ, ವಿಷ್ಣು, ಅಶ್ವಿನಿದೇವತೆಗಳನ್ನೂ, ಅಗ್ನಿ ಕರೆತರಲಿ. ಮಿತ್ರಾವರುಣರು ಯಜಮಾನನಿಗೆ ಸತ್ಯಾತ್ಮಕ ಜೀವನ ಕೊಡಲಿ.

ಅಗ್ನಿ ಪೂಜೆಗೆ ಸಹಾಯಕನಾದವನ, ಹಿತಸಾಧನೆಯಾಗಿ, ಧನ ಒದಗಲಿ. ಕೇಡುಗಳಿಂದಲೂ ಪಾಪಗಳಿಂದಲೂ ರಕ್ಷಣೆ ದೊರೆಯಲಿ.

ಯಜಮಾನನ ಯಜ್ಞ ನಿರ್ವಹಣೆಗೆ, ಆಹ್ಲಾದಕರ ಉತ್ತಮ ಧನ, ರಕ್ಷಣೆ ದಾತೃ, ಪುತ್ರರು ಹಾಗೂ ಯಜ್ಞವೃದ್ಧಿಕರ ಸಂಬಂಧ ಬೆಳೆಯಲಿ. ಪುತ್ರನು ಆಸ್ತಿಕನಾಗಿ ಉದಾರದಾನಿಯಾಗಲಿ.

ಅಗ್ನಿಯು ಹವಿರರ್ಪಿಸುವ ಯಜಮಾನರ ಪಾಪಪುಣ್ಯಗಳನ್ನು, ಬೇರೆ ಮಾಡಲಿ. ಪುಣ್ಯಕರ್ತರು ಪಾಪಿಷ್ಟರನ್ನು ಬೇರೆಮಾಡಲಿ. ದಾರಿದ್ರ್ಯ ಹಿಂಸೆಗಳನ್ನೂ ಇಲ್ಲದಾಗಿಸಲಿ.

**ಸೂಕ್ತ - 3 (ಆ ವೋ ರಾಜಾನಮಧ್ವರಸ್ಯ......**

ವಾಮದೇವ ಋಷಿಗಳು ಅಗ್ನಿ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಯಜಮಾನ ಕರ್ಮವಿಷಯಜ್ಞಾನಿ, ಕರ್ಮಕರ್ತ, ಚಲನವಿಲ್ಲದ ಸ್ಥಿತಿಯಲ್ಲಿ ಹೊಂಬಣ್ಣದ ಪ್ರಭಾತೇಜಸ್ಸಿಂದ ಸರ್ವತ್ರವ್ಯಾಪಿ. ಯಜ್ಞಸ್ಥಾನದಲ್ಲಿ ಉತ್ಕೃಷ್ಟ ಬಲದಿಂದ ಅಪ್ರಮತ್ತ ನರರನ್ನು, ವೀಕ್ಷಿಸುತ್ತಾ ಯಜ್ಞಾಹ್ವಾನ ಮಾಡಲು, ದೇವತೆಗಳನ್ನು ಹೋಗಿ ಸೇರುತ್ತಾನೆ.

ಅಗ್ನಿಯ ಮಹಿಮೆಯಿಂದಲೇ ಸೂರ್ಯನು ಆವಿರ್ಭೂತವಾಗಿ, ಅಂತರಿಕ್ಷದಿಂದ ಉದಕ ಕರೆದು, ಯಜ್ಞದಿಂದ ಶಕ್ತಿ ಪಡೆದು, ಮಾಧುರ್ಯಯುಕ್ತ ನದೀರೂಪವಾಗಿ, ವೇಗವಾಗಿ ಹರಿಯುವಂತಾದದ್ದು.

ಉದಕ ಹಾಗೂ ಧೇನುಗಳು ಸತ್ಯಭೂತ ಯಜ್ಞದಲ್ಲಿ, ಅಪೇಕ್ಷಣೀಯ, ಅಪರಿಪಕ್ವ ಧೇನುಗಳು ಪರಿಪಕ್ವ ಕ್ಷೀರವನ್ನೂ, ಕೃಷ್ಣವರ್ಣದ ಧೇನುಗಳು ಶ್ವೇತವರ್ಣದ ಕ್ಷೀರವನ್ನೂ, ಪ್ರಜೆಗಳ ಮರಣರಾಹಿತ್ಯ ಹಾಗೂ ತೃಪ್ತಿಗಾಗಿ ಉಂಟು ಮಾಡುತ್ತವೆ.

ಯಜಮಾನರು, ಹಿಂಸಕರು ವಂಚಕರು ಆಗಿದ್ದರೆ ಅವರ ಯಜ್ಞಕ್ಕೆ, –ಅವರು ಪಕ್ಕದ ಮನೆಯವರಾದರೂ,– ಅಗ್ನಿಯು ಹೋಗುವುದು ಬೇಡ! ಭ್ರಾತೃವಾದರೂ, ಹವಿಸ್ಸು ಪಡೆವುದು ಬೇಡ! ನಮ್ಮ ಮಿತ್ರರ ಶತ್ರುವಿನ ಭೋಗಸಂಪತ್ತು ನಮಗೆ ಬೇಡ. 'ಮಿಂಚಿನಂತೆ ಬರುವ ಮರಣ'ಕ್ಕೆ ಮುಂಚೆಯೇ ಯಜಮಾನನು ಅಗ್ನಿರಕ್ಷಣೆ ಪಡೆಯಲಿ.

ಯಜಮಾನನಿಗೆ ಒಂದು ಸಮಸ್ಯೆ ಉಂಟಾಗಿದೆ. ಯಜಮಾನನು ಮಾಡಿದ ಪಾಪಗಳು ಏನು? ಅಂತಹ ಪಾಪಗಳನ್ನು ಅಗ್ನಿಯು ವರುಣನಿಗೆ ಏಕೆ ತಿಳಿಸುತ್ತಾನೆ? ದ್ಯುಲ್ಲೋಕ, ಪೃಥ್ವಿ, ಮಿತ್ರ, ಆರ್ಯಮ ಇವರಿಗೇಕೆ ತಿಳಿಸುತ್ತಾನೆ? ಸತ್ಯಸ್ವರೂಪಿವಾಯು, ಪಾಪಾತ್ಮನಾಶಕ ರುದ್ರ, ಲೋಕಪೂಜಿತ ಪೂಷ, ಸತ್ಯಾತ್ಮಕ ಮರುತ್ತುಗಳು, ಸಂವತ್ಸರಾದಿ ದೇವತೆಗಳು – ಇವರಿಗೆಲ್ಲಾ ಏಕೆ ಹೇಳಬೇಕು? ಕ್ಷಯ ಹೇತುಪಾಪವನ್ನು ನಿರ್ಋತಿ, ಬೃಹಸ್ಪತಿ, ವಿಷ್ಣು, ಅದಿತಿ, ಮಹತ್ವರೂಪಿ ಸೂರ್ಯ, ತ್ವರಿತಗಮನಿ ವಾಯು –ಇವರಿಗೇಕೆ ಹೇಳಬೇಕು? ಎಂಬುದೇ ತಿಳಿಯದಾಗಿದೆ.

ಹರ್ಷಕಾರಕ ಶಸ್ತ್ರಗಳು ಸಿದ್ಧವಾದಾಗ ಹಾಗೂ ಯಜ್ಞ ಸಖ್ಯವು ಅಗ್ನಿಗೆ ಉಂಟಾದಾಗ, ಅಗ್ನಿಯು ತೇಜಸ್ಸಿಂದ ಯಜಮಾನಾಭಿಮುಖನಾಗಿ, ಶಸ್ತ್ರ ಮಂತ್ರ ಸ್ತುತಿ ಕೇಳಲಿ. ಮಂಗಳಾತ್ಮಕ ಮನಸ್ಸಿಂದ ಹವಿಸ್ಸುಸ್ವೀಕರಿಸಲಿ.

ಅಗ್ನಿಯು ಪ್ರಕಾಶಿಸಿ, ಸ್ಥಿರ ಪಾಪಗಳನ್ನು ನಾಶಮಾಡಲಿ. ಹಿಂಸಕ ಶತ್ರು ಪ್ರಬಲನಾದರೂ ಅವನನ್ನು ಧ್ವಂಸಮಾಡಲಿ. ದೇವತೆಗಳನ್ನು ಉದ್ದೇಶಿಸಿದ ಈ ಪ್ರಶಂಸನಗಳು, ಪ್ರಸಿದ್ಧವಾಗಲಿ.

**ಸೂಕ್ತ - 4 (ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ.....**

ಋಷಿ ವಾಮದೇವರು ಅಗ್ನಿರಕ್ಷೋಹಾ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಅಗ್ನಿರಶ್ಮಿಗಳು ಆಲಸ್ಯರಹಿತ, ಹಿಂಸಾರಹಿತ, ಭ್ರಮರಹಿತ, ಯಾರಿಂದಲೂ ಹಿಂಸಿಸಲಾಗದವು. ಶತ್ರುಗಳಿಂದ ತಡೆಯಲ್ಪಡದವು, ಆಲಸ್ಯರಹಿತ ಸತತ ಚಲನೆಯಲ್ಲಿ ದಿವ್ಯ ತೇಜಸ್ಸಿಂದ ಶೀಘ್ರ ಸಂಚರಿಸುವವು. ಜ್ವಾಲಾತ್ಮಕವಾಗಿ, ದಾಹಾತ್ಮಕ ಕಿಡಿಗಳೊಂದಿಗೆ ಸರ್ವತ್ರ ಪ್ರಸರಿಸುವುವು.

ಶತ್ರುಚದುರಿಸಿ, ರಾಕ್ಷಸ ನಾಶಮಾಡುವ, ಅಗ್ನಿಯ ತಾಪಕಾರಿ ತೇಜಸ್ಸು, ಅಂಧ ಋಷಿ ಧೀರ್ಘತಮಸ್ಸನ್ನು ಪಾಪದಿಂದ ರಕ್ಷಿಸಿದವು.

ಋಷಿಗೆ, 'ಅಗ್ನಿಯನ್ನು ಸ್ತುತಿಸುವುದರಿಂದ ಉಂಟಾಗುವ ಮಹತ್ ಶಕ್ತಿಯು ರಾಕ್ಷಸ ನಾಶಮಾಡಬಲ್ಲದು' ಎಂಬ ತಿಳಿವು, ತಂದೆ ಗೌತಮರಿಂದ ಪ್ರಾಪ್ತವಾಯಿತು.

ವಿಧ್ಯುಕ್ತವಾಗಿ ಅತಿಥಿಯೋಗ್ಯ ಪೂಜೆ ಮಾಡುವವನಿಗೆ ಅಗ್ನಿ ಸ್ನೇಹಿತನಾಗಿರುತ್ತಾನೆ. ಭಕ್ತಿಯುತ ಮನಸ್ಸಿಂದ, ಆತ್ಮ ಪ್ರೇರಣೆಯಿಂದ, ಅಗ್ನಿಯನ್ನು ಉಪಚರಿಸುವವರು, ಅನುಗ್ರಹಾತ್ಮಕ ಬುದ್ಧಿ ಹೊಂದುತ್ತಾರೆ, ಪುತ್ರಪೌತ್ರ ಧನ ರಕ್ಷಣೆ, ಅಶ್ವಗಳನ್ನು ಹೊಂದುತ್ತಾರೆ. ನಿತ್ಯವಾದ ಧನ ಸಂಪತ್ತು, ಶತ್ರುಧನವನ್ನೂ ಪಡೆಯುತ್ತಾರೆ.

ಅಗ್ನಿಯ ಪ್ರಚಲಿತ ತೀಕ್ಷ್ಣ ಜ್ವಾಲೆಯು ಅಧಿಕ ಸಂಖ್ಯೆಯ ಶತ್ರುವನ್ನೂ, ಶತ್ರುತ್ವ ಬೆಳಸುವವರನ್ನೂ, ಪ್ರತ್ಯೇಕವಾಗಿ ನಾಶ ಮಾಡಲಿ. ದೂರದ, ಹತ್ತಿರದ, ಪಾಪಕಾರಿ ಶತ್ರುಗಳನ್ನೂ, ಕೇಡುಬಯಸುವವರನ್ನೂ, ಬಂಧುವಾದರೂ ಜಯಿಸಿ ವಶಪಡಿಸಿಕೊಳ್ಳಲಿ. ದೂರದ, ಹತ್ತಿರದ ದ್ರೋಹಿ ಶತ್ರುಗಳಿಂದ, ಸ್ತುತಿ ಸಹಿಸದ ರಾಕ್ಷಸರಿಂದ, ದ್ರೋಹಿಗಳ ನಿಂದಾತ್ಮಕ ದೂಷಣೆಗಳಿಂದ ರಕ್ಷಿಸಲಿ.

ಪಡೆದು, ಪ್ರತಿದಿನವೂ ಅವನ ಮಂಗಳಕರ ಯಜ್ಞ ಸಫಲವಾಗಲಿ. ಹಸಿವಿನಿಂದ ವಿಮುಕ್ತಿ, ಧನ ಪ್ರಾಪ್ತಿ ಉಂಟಾಗಲಿ.

ರಕ್ಷಕವಾದ ಕೃಪಾದೃಷ್ಟಿಯ ರಶ್ಮಿಗಳು, ಯಜ್ಞಸ್ಥಾನ ಕ್ರಮಿಸಿ ರಕ್ಷಿಸಲಿ. ಆ ರಶ್ಮಿಗಳನ್ನೂ ಅಗ್ನಿಯು ರಕ್ಷಿಸಲಿ.

(ಅಷ್ಟಕ – 3, ಅಧ್ಯಾಯ – 5)

**ಸೂಕ್ತ - 5 (ವೈಶ್ವಾನರಾಯ ಮೀಳ್ಹುಷೇ.....**

**ಋಷಿ ವಾಮದೇವರು ವೈಶ್ವಾನರ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.**

ದೇವತೆಗಳ ಸಮೂಹ ರೂಪವಾದ ಆದಿತ್ಯ ಮಂಡಲವೇ 'ವೈಶ್ವಾನರಾಗ್ನಿ'. ಗೋವುಗಳಿಂದ ಸೇವಿತ, ಉದಕಸ್ಥಾನಿ ವೈಶ್ವಾನರಾಗ್ನಿಯು, ಸ್ಥಂಭದಂತೆ ಅಂತರಿಕ್ಷವನ್ನು ಎತ್ತಿ ಹಿಡಿದಿದ್ದಾನೆ. ದೇವಮಾನವರಿಗೆಲ್ಲಾ ಸಮಾನನಾದ ಪೃಥ್ವಿಯ ಮೇಲಿರುವ ಮಂಡಲ ಸಂಚಾರಿ ಆಗಿದ್ದಾನೆ. ಯಜಮಾನರ ಶ್ರೇಯಸ್ಸಿಗಾಗಿ, ಐಶ್ವರ್ಯ ಯುಕ್ತನಾಗಿ, ಸರ್ವತ್ರಪ್ರಕಾಶಿ ಆಗಿದ್ದಾನೆ.

ವಾಸಸ್ಥಾನದಲ್ಲಿರುವ ಅಗ್ನಿಯ ತೇಜಸ್ಸು, ಯಜಮಾನರ ಶ್ರೇಯಸ್ಸಿಗಾಗಿಯೇ. ವೈಶ್ವಾನರರು ದ್ಯಾವಾಪೃಥ್ವಿಗಳೊಡನೆ ಕೂಡಿಕೊಂಡಿರುವ, ಗೋವಿನ ಕೆಚ್ಚಲಿಂದ ಕ್ಷೀರ ಪಾನವನ್ನು, ಅಹವನೀಯಾಗ್ನಿರೂಪ ಜಿಹ್ವೆಯಿಂದ ಪಾನಮಾಡಲಿಚ್ಛಿಸುತ್ತಾನೆ. 'ಉದಕದಿಂದ ಪಡೆದ ಗೋಕ್ಷೀರವು, ಭೂಮಿಯ ಉತ್ತಮವಾದ ಪ್ರಿಯವಾದ ಸ್ಥಾನವನ್ನು ರಕ್ಷಿಸುತ್ತದೆ. ವೈಶ್ವಾನರಾಗ್ನಿ ಗೋಕ್ಷೀರವನ್ನು ಗುಹೆಯಲ್ಲಿ ಇಟ್ಟಿದ್ದಾನೆ' ಎಂಬ ಯಜಮಾನರ ತತ್ತ್ವಾರ್ಥದಲ್ಲಿ ದೋಷವಿಲ್ಲ.

ದ್ಯುಲ್ಲೋಕ ಪೃಥ್ವೀಲೋಕಗಳಲ್ಲಿ ಅಡಗಿದ ಧನ, ಸ್ತುತಿರೂಪ ಸಾಧನದಿಂದ ಪಡೆದಧನ ಇವಕ್ಕೆಲ್ಲಾ ಜಾತವೇದಸ್ಸೇ ಪ್ರಭು.

ಆದಿತ್ಯ ಪತ್ನಿ ಉಷಾದೇವಿಯು, ಯಾವಾಗ ಪ್ರಭೆಯಿಂದ ಬೆಳಗುತ್ತಾಳೆ? ನಮ್ಮ ಜ್ಞಾನಕ್ಕೆ ಗೋಚರವಾಗುವ ವಸ್ತುಯಾವುದಿದೆ? ಅದರ ಪ್ರಯೋಜನವೇನು? ಯಾವ ಪ್ರದೇಶದಲ್ಲಿದೆ? ಧನದ ಬೆಲೆ ಏನು? ಧನ ಹಿತಕರವಾಗಿರುವ ಬಗೆ ಏನು? –ಎಂದೆಲ್ಲಾ ಯಜಮಾನನು ತಿಳಿಯಲಿಚ್ಛಿಸುತ್ತಾನೆ, ಅಗ್ನಿಯು ಮಾನವರಿಗೆ ತಿಳಿಸಲಿ. ತಾನು ವಿಶೇಷವಾಗಿ ತಿಳಿದ, ಮಾನವರು ತಿಳಿಯಬೇಕಾದ, 'ಸಾಮ'ವನ್ನು, ಯಜಮಾನರಿಗೆ ತಿಳಿಯುವಂತೆ ಹೇಳಲಿ.

'ಸ್ತೋತ್ರ', ಅಗ್ನಿಗೆ ಅರ್ಪಿಸಲು ಯೋಗ್ಯವಾದದ್ದನ್ನೆಲ್ಲಾ ಪವಿತ್ರಗೊಳಿಸುತ್ತದೆ. ಪರಿಪಕ್ವ ಜ್ಞಾನಿಗಳಾದ ಮಾನವರು, ಯೋಗ್ಯವಾದ ಕರ್ಮಗಳೊಂದಿಗೆ ಹವಿಸ್ಸನ್ನು ವೈಶ್ವಾನರರಿಗೆ ಅರ್ಪಿಸುತ್ತಾರೆ.

ತಂದೆಯ ಮನೆಗೆ ಹೊರಟ, ಸೋದರ ಹಾಗೂ ಪತಿರಹಿತ ಸ್ತ್ರೀ, ಪತಿಯನ್ನು ದ್ವೇಶಿಸುವ ಸ್ತ್ರೀ, ದುಷ್ಟವ್ಯಾಪಾರ ಉಳ್ಳವರು, ಪಾಪಾತ್ಮರಾಗಿರುವವರು, ಅಸತ್ಯಾತ್ಮಕ ವ್ಯವಹಾರ ಉಳ್ಳವರು –ಇವರೆಲ್ಲಾ 'ದುಷ್ಟರು', ಇವರುಗಳು ಪಾಪಿಗಳು ಅನುಭವಿಸುವ 'ನರಕ'ವನ್ನು ಉತ್ಪನ್ನ ಮಾಡುತ್ತಾರೆ.

ಅನ್ನ ರಹಿತ, ನಿರ್ದಿಷ್ಟರಹಿತ, ಹ್ರಸ್ವವಾದ ತುಚ್ಛವಾದ ಯಜ್ಞದಲ್ಲಿ, ಹವಿರೂಪಸಾಧನ ರಹಿತ ಯಾಜ್ಞಿಕರು, ದುಃಖಪೂರಿತರಾಗುವರು. ಮಹಾತ್ಮ ಅಗ್ನಿಯನ್ನು ದೂಷಿಸುವುದು ಬೇಡ.

ಪ್ರಜ್ಞಾವಂತ ಮಿತ್ರಾವರುಣರು, ಹಿಂಸಿಸುವ ಶತ್ರುಗಳನ್ನು, ತಮ್ಮ ತೇಜಸ್ಸಿಂದ ನಾಶ ಮಾಡಲಿ. ಕರ್ಮತ್ಯಜಸದಿರುವ ಯಜಮಾನರಿಗೆ, ಹಿತಕರ ಸಪ್ತ ಧಾತುಗಳಿಂದ ಕೂಡಿದ ಧನಪೂಜ್ಯ ಅನ್ನವನ್ನು ಅಗ್ನಿಯು ಕೊಡಲಿ. ಯಜಮಾನನು ರಿಕ್ತಹಸ್ತನಾಗದಿರಲಿ.

**ಸೂಕ್ತ - 6 (ಊರ್ಧ್ವ ಊ ಷು ಣೋ ಅಧ್ವರಸ್ಯ.....**

ಋಷಿ ವಾಮದೇವರು ಅಗ್ನಿ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಮನು ಸಂಬಂಧಿ ಮಾನವ ಅಧ್ವರ್ಯುಗಳು, ಉಷಃಕಾಲದಲ್ಲಿ, ಸ್ತ್ರೀ ರೂಪದಂತಿರುವ ತಮ್ಮ ಅಂಗುಲಿಗಳಿಂದ, ಯಜ್ಞನೇತ್ರ ಅಗ್ನಿಯನ್ನು ಉತ್ಪನ್ನ ಮಾಡಿದರು.

ಹೊಂಬಣ್ಣದ, ಪ್ರಾಯದ, ಶ್ರೇಷ್ಠನಡುಗೆಯ, ಅಗ್ನಿಯ ಅಶ್ವಗಳು, ಯಜ್ಞಕ್ಕೆ ಅಗ್ನಿಯನ್ನು ಕರೆತರುತ್ತವೆ. ಅಗ್ನಿಯು ಅಂತರಿಕ್ಷದಲ್ಲಿ ಧೂಮಸ್ತೋಮವನ್ನೂ, ಊರ್ಧ್ವಮುಖ ಪ್ರಕಾಶವನ್ನೂ, ಧ್ವಜದಂತೆನಿಲ್ಲಿಸಿದ್ದಾನೆ. ಇವನ ಪ್ರಕಾಶಮಾನಕಾರಣದಿಂದ ಸಮಸ್ತ ಭೂತಜಾತಗಳೂ, ಭೀತಿಗೊಳ್ಳುತ್ತವೆ. ಪಶು ಹಾಗೂ ಪ್ರಕಾಶಮಾನ ಆಯುಧವು, ಯೂಪವನ್ನು ಸಮೀಪಿಸಿದಾಗ, ಅಗ್ನಿಯು, ಪಶುಪಾಲಕನಂತೆ ಮೂರುಸಲ ಪ್ರದಕ್ಷಿಣೆ ಮಾಡುತ್ತಾನೆ.

ಪ್ರಾಜ್ಞರ ಸ್ತುತಿಯನ್ನು ವೃದ್ಧಿ ಮಾಡಬಲ್ಲ ಅಗ್ನಿಯಕಾಂತಿಯು, ನಿಶೆಯ ಅಂಧಕಾರವನ್ನು ಮುಚ್ಚಲಾಗದು. ಸ್ವೇಚ್ಛಾವೃತ್ತಿಯ ಅಗ್ನಿಯು, ಪರಿಮಿತಿ ಉಳ್ಳವನಾಗಿ ಪ್ರಭೆಯಿಂದ ಪ್ರಕಾಶಿಸುತ್ತಾನೆ. ರಾಕ್ಷಸರು, ನಿಶಾಚರರು, ಹಿಂಸಕರಿಗೆ, ಭೀತಿಜನಕನಾದ ಅಗ್ನಿಯು ರಮಣೀಯ ಕಲ್ಯಾಣಾತ್ಮಕನಾಗಿರುತ್ತಾನೆ.

ಉನ್ನತ ಸ್ಥಾನದಲ್ಲಿ ಕ್ರಮಿಸುವ ವೈಶ್ವಾನರಾಗ್ನಿಯ ಪ್ರಭಾರಶ್ಮಿಗಳು, ತೃಪ್ತಮನುಷ್ಯರ ನಡುವೆ ಪ್ರಕಾಶಿಸಿ, ವೃಷ್ಟಿ ಉದಕತರುವುದು. ಶತ್ರುಗಳಿಂದ ತಡೆಯಲಾಗದ ಪ್ರಭೆಯನ್ನು, ದ್ಯಾವಾಪೃಥ್ವಿಗಳೂ ತಡೆಯಲಾರವು.

ಋತ್ವಿಕರು ಅಗ್ನಿಯನ್ನು ಕುರಿತು ಶಸ್ತ್ರಸ್ತುತಿಪಠಿಸುತ್ತಾರೆ, ಅಧ್ವರ್ಯುಗಳು ನಮಸ್ಕರಿಸುತ್ತಾರೆ. ಯಜ್ಞ ದೇವತಾರಾಧನೆಗಾಗಿರುವ, ಸಮಸ್ತ ಮನನೀಯ ಧನ–ಜುಹೂಪಾತ್ರೆಯಲ್ಲಿ ತುಂಬಿದೆ.

ಪ್ರಸಿದ್ಧ ಅಶ್ವಗಳಂತೆ, ಮರುದ್ದೇವತೆಗಳಂತೆ, ಸಂಚಾರಿಸ್ವಭಾವದ ಪ್ರಕಾಶಮಾನ

## ಸೂಕ್ತ - 7 (ಅಯಮಿಹ ಪ್ರಥಮೋ ಧಾಯಿ.....

ಋಷಿ ವಾಮದೇವರು ಅಗ್ನಿದೇವನನ್ನು ಜಗತೀ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಕಲ ಪ್ರಜೆಗಳಿಗೂ ಈಶ್ವರ; ಪ್ರಭು, ಎಲ್ಲರಿಂದ ಸೇವಿತ, ಯಜ್ಞಸಂಬಂಧಿದೂತ, ಉದಕ ಹಾಗೂ ವೃಕ್ಷಗಳಲ್ಲಿ ಅಡಗಿರುವವ, ಯಜ್ಞಆರಿತವ, ಯಜ್ಞದಲ್ಲಿ ಸ್ತುತಿಸಲ್ಪಡುವವ, ಯಜ್ಞಪ್ರಕಾಶಕ, ಸ್ತುತಿಪೂರ್ವಕ ಹವಿಸ್ಸು ಸ್ವೀಕರಿಸುವವ, ದ್ಯಾವಾಪೃಥಿವಿಗಳನ್ನು ಅವುಗಳ ನಡುವಿನ ಅಂತರಿಕ್ಷವನ್ನೂ ಅರಿತವ, ದಾವಾಗ್ನಿರೂಪ ಸಪ್ತಸಂಖ್ಯಾಕ ತೇಜಸ್ವಿ, ತೀಕ್ಷ್ಣವಾಗಿ ವಾಯು ಬೀಸಿದಾಗ ವೃಕ್ಷಸಮೂಹದಲ್ಲಿ ಜ್ವಾಲೆ ಸೇರುತ್ತದೆ. ಅನ್ನಕಾಷ್ಠಾದಿಗಳನ್ನು ವಾಯು ಸಹಾಯದಿಂದ ವೇಗದಹಿಸಿ, ವ್ಯಾಪಿಸಲು ಪ್ರಚೋದಿಸಿ ಯಜಮಾನನ ದೂತನಾಗಿ, ಅಗ್ನಿ ಇದ್ದಾನೆ.

ಭೃಗುವಂಶ ಋಷಿ 'ಅಪ್ನವಾನ'ರು ಅಗ್ನಿಯನ್ನು ಜಾಜ್ವಲ್ಯ ಮಾಡಿದರು. ಯಜಮಾನರು ಯಜ್ಞಜನಕ ಅರಣಿಗಳನ್ನು ಹಿಡಿದಕೂಡಲೇ ಅಗ್ನಿ ಉತ್ಪನ್ನನಾಗಿ, ಮಂಥನದಿಂದ ಅಗ್ನಿತೇಜಸ್ಸು ಋತ್ವಿಕಾದಿಗಳಿಗೆ ಕಾಣಿಸಿಕೊಳ್ಳುತ್ತದೆ. ಋತ್ವಿಕಾದಿಗಳು ಯಜ್ಞದಲ್ಲಿ, ಯಜ್ಞಗೃಹದಲ್ಲಿ ಅಗ್ನಿಯನ್ನು ಆಹ್ವಾನಿಸುತ್ತಾರೆ, ಉಷಃಕಾಲದಲ್ಲಿ, ಯಜ್ಞಕಾಲದಲ್ಲಿ ಅಧ್ವರ್ಯಾದಿಗಳು ಅಗ್ನಿಯನ್ನು ಆರಾಧಿಸುತ್ತಾರೆ.

ಸ್ವಲ್ಪ ಹವಿಸ್ಸನ್ನೇ ಅಧಿಕವೆಂದು ಅರಿಯುತ್ತಾ, ಕೃಷ್ಣವರ್ಣದ ಮಾರ್ಗದಲ್ಲಿ ದೇವಲೋಕ ಅವರೋಹಣ ಸ್ಥಾನವನ್ನು ಅಗ್ನಿ ಹತ್ತುವನು.

ಪ್ರಕಾಶಮಾನ ಪ್ರಜೆಗಳ ನಡುವೆ ಅಗ್ನಿತೇಜಸ್ಸು ಯಾವಾಗ ಪ್ರಕಟವಾಗುತ್ತದೆ?

## ಸೂಕ್ತ - 8 (ದೂತಂ ವೋ ವಿಶ್ವವೇದಸಂ.....

ಋಷಿ ವಾಮದೇವರು ಅಗ್ನಿದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಇಂದ್ರಾದಿ ದೇವತೆಗಳ ಮಹತ್ವ ತಿಳಿದವ. ದೇವದೂತತ್ವ ತಿಳಿದವ. ದೇವತೆಗಳ ಅಂತರಿಕ್ಷ ಆರೋಹಣ ಸ್ಥಾನ, ಯಜಮಾನಾಪೇಕ್ಷಿತ ಧನವನ್ನು ತಿಳಿದವ. ದ್ಯಾವಾಪೃಥ್ವಿಗಳ ನಡುವೆ ಸಂಚರಿಸುತ್ತಾ, ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತಾ, ಸಮಿತ್ತುಗಳಿಂದ ಪ್ರಜ್ವಲಿತನಾಗಿ, ಸ್ತುತಿವಾಕ್ಕಿಂದ ಪೂಜಿತನಾಗಿ, ಹವಿರ್ದಾನದಿಂದ ತೃಪ್ತನಾಗಿ, ಯಜ್ಞಕಾರ್ಯ ನಿರತನಾಗಿ ಅಗ್ನಿಯು ಇದ್ದಾನೆ. ಯಜ್ಞಗೃಹದಲ್ಲಿ ಯಜಮಾನನಿಗೆ, ರಥಾಶ್ವಾದಿ ಧನದಾತನಾಗಿ ಪ್ರಖ್ಯಾತನಾಗಿದ್ದಾನೆ.

ಯಜಮಾನನಿಗೆ, ವೀರ್ಯವಂತ ಪುತ್ರರನ್ನು ಪಶ್ವಾದಿ ಧನಗಳನ್ನು ಅನ್ನ ಸಂಪತ್ತನ್ನು ಕೊಟ್ಟು ಉತ್ಸಾಹವನ್ನು ಪ್ರೇರಿಸಲಿ.

ಮಾನವರ ಪಾಶಾರ್ಹ ಪಾಪಗಳನ್ನು ಅಗ್ನಿ ನಾಶಮಾಡಲಿ.

## ಸೂಕ್ತ - 9 (ಅಗ್ನೇ ಮೃಳ ಮಹಾ ಅಸಿ ಯ ಈಮಾ......

ಋಷಿ ವಾಮದೇವರು ಅಗ್ನಿದೇವನನ್ನು ಗಾಯತ್ರೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಸಮಸ್ತ ದೇವತೆಗಳಿಗೂ ದೂತ, ಮಾನವ ಯಾಗ ಕರ್ಮ ಇಚ್ಛಿಸುತ್ತಾ, ಯಾಗಸಂಬಂಧಿ ಹವಿಸ್ಸು ಅಪೇಕ್ಷಿಸುತ್ತಾ, ಅಧ್ವರ್ಯುವಾಗಿ, ದೇವಪತ್ನಿಯರನ್ನು ಪೂಜಿಸುವವನಾಗಿ, ಯಜ್ಞಯಜಮಾನನಾಗಿ, ಬ್ರಾಹ್ಮಣಾಛಂಸಿಯಾಗಿ ಕುಳಿತುಕೊಳ್ಳುತ್ತಾನೆ. ದೇವತೆಗಳ ಸಾನ್ನಿಧ್ಯ ಅಪೇಕ್ಷಿಸುತ್ತಾ, ಯಜಮಾನಾಭಿಮುಖ ಬಂದು, ಯಜ್ಞಕ್ಕೆ ಸಕಾಲದಲ್ಲಿ ಅನುಮತಿ ಕೊಡುತ್ತಾನೆ.

ಶತ್ರು ಪ್ರತಿಭಟನ ಸಾಧನ ರಥದಲ್ಲಿ ಇರುವ ಅಗ್ನಿಯನ್ನು, ಪ್ರತಿಭಟಿಸಲು, ಅಸುರರಿಗೆ ಅಸಾಧ್ಯ.

ಅಗ್ನಿಯು ಸಕಲದಿಕ್ಕಿನಲ್ಲೂ, ಹವಿರ್ದಾಹಕ ಯಜಮಾನರನ್ನು ರಕ್ಷಿಸಲಿ. ಯಾಗ, ಯಾಗ ಸಂಬಂಧಿಹವಿಸ್ಸು, ಸ್ತೋತ್ರ ಇವನ್ನೆಲ್ಲಾ ಅಗ್ನಿಯು ಸೇವಿಸಿ ಯಜಮಾನರನ್ನೂ ಸುಖಪಡಿಸಲಿ.

## ಸೂಕ್ತ - 10 (ಅಗ್ನೇ ತಮದ್ಯಾಶ್ವಂ ಸ್ತೋಮೈಃ......

ವಾಮದೇವ ಋಷಿಗಳು ಅಗ್ನಿದೇವನನ್ನು ಪದಪಂಕ್ತಿ, ಉಷ್ಣಿಕ್ ಪದಪಂಕ್ತಿ ಮಹಾಪದಪಂಕ್ತಿ ಉಷ್ಣಿಕ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿ ತೇಜಸ್ಸು ಶುದ್ಧ, ಹಿತಕರ, ರಮಣೀಯ, ಪ್ರಸಿದ್ಧವಾದದ್ದು. ಅಗ್ನಿಯ ಜ್ವಾಲೆ ಶುದ್ಧಕಾರಕ, ಶಬ್ದಕಾರಕ, ಸ್ವರ್ಣಾಭರಣಗಳಂತೆ ಪ್ರಕಾಶಮಾನ.

ಸೋದರಪ್ರೇಮದ ಕರ್ಮಗಳು ಅಗ್ನಿದೇವನಿಗೆ ಮಂಗಳಾತ್ಮಕವಾಗಿರುತ್ತದೆ. ಅತಿ ಪ್ರಾಚೀನಪಾಪವಾಗಿದ್ದರೂ ಅನುಗ್ರಹದೊಂದಿಗೆ ಪಾಪನಾಶಮಾಡಿಯೇ ತೀರುತ್ತಾನೆ. ಯಜಮಾನನು ತನ್ನ ಅಭೀಷ್ಟೆ ಫಲಿಸುವಂತೆ ಅಗ್ನಿಯನ್ನು ಸ್ತುತಿಸುತ್ತಾನೆ.

ಯಜ್ಞವು ಮಂಗಳಾತ್ಮಕ, ಪ್ರಸಿದ್ಧ, ಇಷ್ಟಾರ್ಥಸಾಧಕ, ಸತ್ಯಾತ್ಮಕ, ಮಹತ್ತ್ವಉಳ್ಳದ್ದು. ಅಗ್ನಿಯು ಯಜ್ಞನೇತ್ರವಾಗಿರಲಿ. ಶೋಭನಾತ್ಮಕಮನಸ್ಸಿಂದ ಸಮಸ್ತ ತೇಜಸ್ಸಿಂದ, ಯಜಮಾನಾಭಿ–ಮುಖನಾಗಿರಲಿ. ದೇವತೆಗಳ ನಿವಾಸದ ಯಜ್ಞದಲ್ಲಿ ಅಗ್ನಿಯು ಯಜಮಾನ ಸಂಬಂಧಕಾರಕನಾಗಿರಲಿ.

## ಸೂಕ್ತ - 11 (ಭದ್ರಂ ತೇ ಅಗ್ನೇ ಸಹಸಿನ್ನನೀಕ.....

ಋಷಿ ವಾಮದೇವರು ಅಗ್ನಿದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು ಅನೇಕವಿಧ ಯಜ್ಞಗಳಲ್ಲಿ, ಬಹುರೂಪಗಳಲ್ಲಿ ಉತ್ಪನ್ನನಾಗುತ್ತಾನೆ. ಸ್ತುತಿಸುವ ಯಜಮಾನರಿಗೆ, ಯಾಗಾದಿಕರ್ಮ ಮೂಲಕ, ಸ್ವರ್ಗ ಮಾರ್ಗ ತೆಗೆಸುತ್ತಾನೆ; ಪರಾಕ್ರಮ ಪ್ರಕಟಿಸುತ್ತಾನೆ. ದೇವತೆಗಳನ್ನು ತೃಪ್ತಿಗೊಳಿಸುವ ಜಿಷ್ಣೆಯವನಾಗಿ, ರಾತ್ರಿಕಾಲದಲ್ಲಿ ಮಂಗಳಕರ ಪ್ರಕಾಶಕನಾಗಿ, ಅನುಗ್ರಹ ಬುದ್ಧಿಯಿಂದ ಪಾಪಿಗಳನ್ನು ಬೇರೆ ಮಾಡಿ, ರಾಕ್ಷಸನಾಶಮಾಡುತ್ತಾನೆ.

ಯಜ್ಞಸಂಬಂಧ ಸಕಲಕರ್ಮಗಳೂ, ಸ್ತುತಿರೂಪ ಉತ್ತಮಸ್ತೋತ್ರಗಳೂ, ಸುಖ, ಸಂಪಾದಿತಧನ, ಶ್ರೇಷ್ಠಗಾಮಿ ಅಶ್ವಗಳು –ಎಲ್ಲಾ ಅಗ್ನಿಯಿಂದ ಉತ್ಪನ್ನವಾದವುಗಳೇ. ಮಹದ್ಧನ ಯಜ್ಞಕರ್ತ ಬಲವಂತ, ಹವಿರೂಪಅನ್ನ ಪ್ರಕಟಿಸುವ ಪುತ್ರನೂ ಅಗ್ನಿಯಿಂದ ಉತ್ಪನ್ನನಾದವನೇ.

ಯಜಮಾನರು ಅಗ್ನಿಯನ್ನು ಸ್ತುತಿಪೂರ್ವಕ ಕರ್ಮಗಳಿಂದ ಸ್ತುತಿಸುತ್ತಾರೆ.

ಪೂರಮಾಡಲಿ.

## ಸೂಕ್ತ - 12 (ಯಸ್ತ್ವಾಮಗ್ನ ಇನಧತೇ.....

ಋಷಿ ವಾಮದೇವರು ಅಗ್ನಿ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಯಜಮಾನನು, ತೃಪ್ತಿಕಾರಕ ಕರ್ಮಗಳಿಂದ ಸವನತ್ರಯಗಳಲ್ಲಿ, ಸೃಕಪಾತ್ರೆ ಹಿಡಿದು ಅಗ್ನಿಯನ್ನು ಪ್ರಕಾಶಗೊಳಿಸುತ್ತಾನೆ. ತೇಜಸ್ಸನ್ನು ವೃದ್ಧಿಗೊಳಿಸುತ್ತಾನೆ. ಪ್ರಜ್ವಲಿತ ಅಗ್ನಿ ತೇಜಸ್ಸನ್ನು ಅರಿಯುತ್ತಾನೆ. ಸೇವಿಸಿದ ಯಜಮಾನರಿಗೆ ಅಗ್ನಿಯು ಅವರವರ ಕರ್ಮಕ್ಕೆ ಅನುಗುಣವಾಗಿ ರಮಣೀಯ ಧನವನ್ನು ಕೊಡುತ್ತಾನೆ.

ಅಗ್ನಿಯು ಸರ್ವತ್ರವ್ಯಾಪ್ತ, ಪಾಪನಾಶಕ, ಅಜ್ಞಾನದಿಂದ ಮಾಡಿದಪಾಪಕ್ಕೆ, ದೇವತೆಗಳಿಂದ, ಮಾನವರಿಂದ ಹಿಂಸೆ ತಪ್ಪಿಸುವವ, ಪಾಪದಿಂದ ಮುಕ್ತಮಾಡುವವ.

ಅಗ್ನಿಯು, ತನ್ನ ವಿಷಯದಲ್ಲೇ ಯಜಮಾನನು ಮಾಡಿದ ಪಾಪಗಳಿಂದ ಮುಕ್ತನನ್ನಾಗಿ ಮಾಡಲಿ. ಪಾಪನಾಶಮಾಡಲಿ, ಶತ್ರುನಾಶಮಾಡಿ, ಯಜಮಾನನಿಗೆ ಪುತ್ರಪೌತ್ರಾದಿ ಧನ ಯಶಸ್ಸು ಸುಖಶಾಂತಿ ಉಂಟುಮಾಡಲಿ.

## ಸೂಕ್ತ 13 (ಪ್ರತ್ಯಗ್ನಿರುಪಸಾಮಗ್ರ........

ಋಷಿ ವಾಮದೇವರು, ಅಗ್ನಿದೇವನನ್ನು, ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದೇವತೆಗಳು ಸೂರ್ಯನನ್ನು ಸೃಷ್ಟಿಸಿದರು ಸೂರ್ಯನು ಪ್ರಾಣಿಸಮೂಹಕ್ಕೆ ಪ್ರೇರಕ, ಸಪ್ತಸಂಖ್ಯಾಕ ಅಶ್ವಯುಕ್ತ, ರಸಾಕರ್ಷಣೆಗಾಗಿ ರಶ್ಮಿ ಸಮೂಹ ವಿಸ್ತರಿಸುವವ. ಸೂರ್ಯತೇಜಸ್ಸಿನ ರಶ್ಮಿಗಳು ದ್ಯುಲೋಕವನ್ನು ತುಂಬುವಾಗ, ವರುಣ ಮಿತ್ರ ಮತ್ತು ಇತರ ದೇವತೆಗಳು ಸವಿತೃವನ್ನು ಅನುಸರಿಸುವರು. ಅಂತರಿಕ್ಷಸ್ಥ ಊರ್ಧ್ವಮುಖಿ ಸ್ವರ್ಗರಕ್ಷಕ, ಸೂರ್ಯನಗತಿಯನ್ನು ಯಾರೂ ಅರಿಯಲಾರರು; ಯಾರೂ ಅವನನ್ನು ಹಿಂಸಿಸಲಾರರು; ತತ್ತ್ವಶಃ ಯಾರೂ ಸೂರ್ಯನನ್ನು ಅರಿಯಲಾರರು.

ಅಶ್ವಿನೀ ದೇವತೆಗಳು ಯಜಮಾನನ ಗೃಹ ಸೇರಲಿ. ರಾಕ್ಷಸನಿವಾಸ ಭೂತ ರಾತ್ರಿಯನ್ನು ಕೊನೆಗಾಣಿಸಿ, ಚರ್ಮದಂತೆ ಹರಡಿರುವ ಅಂಧಕಾರವನ್ನು ಸೂರ್ಯನು ನಾಶಮಾಡಲಿ.

## ಸೂಕ್ತ - 14 (ಪ್ರತ್ಯಗ್ನಿರುಷಸೋ ಜಾತವೇದಾ.......

ಋಷಿ ವಾಮದೇವರು, ಅಗ್ನಿ, ಲಿಂಗೋಕ್ತ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಗ್ನಿಯು, ಪ್ರಕಾಶಮಾನ ಸಂಪದ್ಯುಕ್ತ, ಜಾತಪ್ರಜ್ಞ, ಜಾತಧನಿ, ತೇಜೋಯುತ ಪ್ರಕಾಶ ಉಷಸ್ಸುಗಳಿಗಾಗಿ ಪ್ರಸಿದ್ಧ.

ಮಹತ್ವರೂಪಿ. ಸಮಸ್ತ ವ್ಯವಹಾರಗಳನ್ನೂ ಅರಿಯುವವಳು. ಮಲಗಿರುವವರನ್ನು ಎಬ್ಬಿಸಿ, ಮಂಗಳ ಉಂಟುಮಾಡಲು ಉದಯಿಸುತ್ತಾಳೆ.

ಅಶ್ವಿನೀ ದೇವತೆಗಳು ಕಾಮವರ್ಷಕರು. ಉಷೋದಯಕಾಲದಲ್ಲಿ ಸೋಮ ಸೇವಿಸಿ ಹರ್ಷಿಸಲು ಅಶ್ವರಥದಲ್ಲಿ ಯಜ್ಞಾಭಿಮುಖರಾಗಲಿ. ಸಕಲ ಲೋಕಕ್ಕೂ ತೇಜಸ್ಸುಂಟುಮಾಡುವ ಸವಿತೃವು ಲೋಕಪ್ರೇರಕನಾಗಿ, ಧ್ವಜದಂತೆ, ಉನ್ನತಪ್ರಕಾಶಿ ಭಾನುವನ್ನು ಆಶ್ರಯಿಸುತ್ತಾನೆ.

ಸೂರ್ಯನು, ಸಕಲ ಲೋಕವನ್ನೂ ವಿಶೇಷರೀತಿಯಲ್ಲಿ ನೋಡತಕ್ಕವ. ದ್ಯಾವಾಪೃಥಿವಿ ಅಂತರಿಕ್ಷಗಳನ್ನೂ ತನ್ನ ಕಿರಣಗಳಿಂದ ಪೂರ್ಣತುಂಬುತ್ತಾನೆ. ಮಂಡಲಾಧಿಕಾರಿ ಸಮೀಪ ಸಂಚಾರಿ ಸೂರ್ಯನು, ತಡೆಯಿಲ್ಲದ ಗತಿಯವ; ಯಾರಿಂದಲೂ ಹಿಂಸಿಸಲ್ಪಡದವ, ದ್ಯುಲೋಕ ಸ್ತಂಭಪ್ರಾಯ, ಅಂತರಿಕ್ಷಸ್ಥ. ಸೂರ್ಯನು ಯಾವ ಬಲದೊಡನೆ ಸಂಚರಿಸುತ್ತಾನೆ? ಯಾವ ರೀತಿ ಸ್ವರ್ಗವನ್ನು ರಕ್ಷಿಸುತ್ತಾನೆ? –ಎಂಬುದರ ರಹಸ್ಯವನ್ನು ಯಾವನು ತಿಳಿದಿದ್ದಾನೆ?

**ಸೂಕ್ತ - 15 (ಅಗ್ನಿರ್ಹೋತಾ ನೋ ಅಧ್ವರೇವಾಜೀ.......**

ಋಷಿ ವಾಮದೇವರು ಅಗ್ನಿ, ಸೋಮ, ಸಹದೇವ, ಅಶ್ವಿನೀ ದೇವತೆಗಳನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ

ಇಂದ್ರಾದಿಗಳನಡುವೆ, ಯಜ್ಞನಿರ್ವಾಹಕನಾದ ಅಗ್ನಿಯನ್ನು, ಋತ್ವಿಕಾದಿಗಳು ಪ್ರತಿದಿನವೂ ಅತಿಶಯವಾಗಿ ಸ್ತುತಿಸುತ್ತಾರೆ. ಮಾನವಯಜಮಾನರ ಸಾಮರ್ಥ್ಯ, ಉಪಚಾರಗಳು ಅಗ್ನಿಗಾಗಿಯೇ. ಹವಿರರ್ಪಿಸುವವರಿಗೆ ರಮಣೀಯ ಧನವನ್ನು ವ್ಯಾಪಕವಾಗಿ ಕೊಡುವವ, ಉತ್ತರವೇದಿಯಲ್ಲಿ ಪ್ರಜ್ವಲಿಸುವವ ಅಗ್ನಿಯೇ.

ದೇವವಾತನ ಪುತ್ರ ಸೃಜಯನ ಯಜ್ಞಾರ್ಥ ಅಗ್ನಿಯು ಪ್ರತ್ಯಕ್ಷನಾದನು. ಯಜಮಾನನನ್ನು, ದೊರೆ ಸಹದೇವನಪುತ್ರ ಸೋಮನು, ಬರಮಾಡಿಕೊಂಡು, ತಂದಿದ್ದ ಎರಡು ಪಳಗಿದ ಅಶ್ವಗಳನ್ನು 'ಇವು ನಿನ್ನವು' ಎಂದು ಒಪ್ಪಿಸಿದಾಗ, ಯಜಮಾನನು ಪಡೆದನು.

ಅಶ್ವಿನೀ ದೇವತೆಗಳನ್ನು ತೃಪ್ತಿಗೊಳಿಸುವ ದೊರೆ, ಸೋಮನು ಪೂರ್ಣಾಯುವಾಗಲಿ, ರಾಜ ಪುತ್ರರನ್ನು ಪೂರ್ಣಾಯಸ್ಸು ಉಳ್ಳವರನ್ನಾಗಿಮಾಡಲಿ.

**ಸೂಕ್ತ 16 (ಆ ಸತ್ಯೋ ಯಾತು ಮಘವಾ........**

ಋಷಿ ವಾಮದೇವರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಪರಿಣಾಮಕ ಅಶ್ವಗಳೊಡೆಯ, ಸೋಮದಲ್ಲಿ ಅತಿಶಯ ಶ್ರದ್ಧೆ ಇರುವವ, ಅತಿಶಯ ಸತ್ವಾತ್ಮಕ, ಮೇಘಸೀಳಿ ವೃಷ್ಟಿಸುರಿಸುವವ, ಪೃಥ್ವಿಯನ್ನು ಚೈತನ್ಯಶೀಲಳನ್ನಾಗಿ ಮಾಡುವವ.

ಹಿಂದಿನ ಋಷಿಗಳಂತೆಯೇ ಈಗಲೂ ಅನೇಕ ಋಷಿಗಳಿಂದ ಸ್ತುತಿತನಾಗಿ, ಅವರನ್ನು ರಾಕ್ಷಸ ಹಿಂಸೆಯಿಂದ ತಪ್ಪಿಸಿ, ಅನ್ನದ ಸಮೀಪ ಸೇರಿಸುವವನಾಗಿದ್ದಾನೆ. ವನಗಜದಂತೆ ವಜ್ರಾಯುಧಿಯು, ಸಿಂಹ ಭಯಂಕರನಾಗಿದ್ದಾನೆ.

ಸೋಮಪಾನ ಮಾಡಿದನಂತರ, ಅಳತೆಗೆಮೀರಿದ ಮಹತ್ವಪಡೆದು, ಸಕಲ ಭುವನಗಳಿಗಿಂತಲೂ ಅಧಿಕವಾಗಿಬೆಳೆದ ಇಂದ್ರನು, ದ್ಯಾವಾಪೃಥ್ವಿಗಳನ್ನೆಲ್ಲಾ ವ್ಯಾಪಿಸಿ, ಪ್ರಪಂಚವನ್ನೆಲ್ಲಾ ತನ್ನ ಅಧೀನ ಮಾಡಿಕೊಂಡನು.

ಸೂರ್ಯನ ಮುಂದೆ ಇತರರೆಲ್ಲರ ಪ್ರಭಾವಗಳು ಕುಂದಿದರೆ, ಇಂದ್ರನ ಶರೀರದ ಪ್ರಭಾವರೂಪವು ಅಧಿಕಗೊಳ್ಳುತ್ತದೆ. ಸೂರ್ಯನು ಸಕಲರಿಗೂ ನೇತ್ರ. ಅಂಧಕಾರ ನಿರ್ಮೂಲನ ಮಾಡಿ, ದೇವತೆಗಳು ಪ್ರಭಾಯುತರನ್ನು ಮಾಡಿ, ಮಾನವರಿಗೆ ಜನ್ಮಕೊಟ್ಟನು.

'ಇಂದ್ರನನ್ನು ಯುದ್ಧದಲ್ಲಿ ನಂಬಿದಂತೆಯೇ, ಯಜ್ಞದಲ್ಲೂ ಯಜಮಾನರು ನಂಬಿದ್ದಾರೆ. ಇಂದ್ರನ ವಜ್ರಾಯುಧವನ್ನು ಕೈಯಿಂದ ಬಿಟ್ಟರೆ, ಅದು ಯಜಮಾನನ ಶರೀರದ ಮೇಲೆ ಬೀಳದಂತೆ, ಇಂದ್ರನೇ ರಕ್ಷಿಸುವನು' – ಎಂಬ ನಂಬಿಕೆ ಯಜಮಾನನಿಗೆ ಇದೆ. 'ಇಂದ್ರಾಪೇಕ್ಷಿಗಳಿಗೆ ಅನ್ನ, ಧನ, ಸಂಪತ್ತು ಪುತ್ರಾದಿ ಪರಿಜನ, ಶತ್ರುಜಯ ಉಂಟಾಗುತ್ತದೆ' – ಎಂದುತಿಳಿದ ಯಜಮಾನನು, ಸ್ತೋತ್ರ ಪ್ರಶಂಸೆ ಪ್ರಾರ್ಥನೆಸಲ್ಲಿಸುತ್ತಾನೆ. ಇಂದ್ರನು, ಲಕ್ಷ್ಮಿಯಂತೆ ಪುಷ್ಟಿದಾಯಕನಾಗುತ್ತಾನೆ.

ಇಂದ್ರನು 'ಕುತ್ಸ'ನನ್ನೂ ಹುರಿದುಂಬಿಸಿದಾಗ, ಇಂದ್ರಸಖಿತ್ವಕ್ಕಾಗಿ, ಕುತ್ಸನು ದಸ್ಯುಗಳನ್ನು ಕೊಲ್ಲುವ ಮನಸ್ಸು ಮಾಡಿದನು. ನಂತರದಲ್ಲಿ ಸಮಾನರೂಪಸ್ಥರಾದ – ಇಂದ್ರ ಕುತ್ಸ – ಇಬ್ಬರೂ ಇಂದ್ರನ ಮನೆಗೆ ತೆರಳಿದಾಗ, ಇಂದ್ರನ ಹೆಂಡತಿಯು, ಇಬ್ಬರನ್ನೂ ನೋಡಿ ಸಂಶಯಗೊಂಡಳು.

ಗ್ರಾಹ್ಯವಾದ ಅನ್ನ ಪಡೆಯಲು, ಕುತ್ಸನು ಆಳವಾದ ನೀರನ್ನು, ಯಜುಗಾಮಿ, ಅಶ್ವರಥದಲ್ಲಿ ದಾಟಿದನು.

ಕುತ್ಸನ ಹಿತಕ್ಕಾಗಿ ಇಂದ್ರನು ಶುಷ್ಣಾಸುರನನ್ನು ಕೊಂದನು. ಕುಯವ ಮತ್ತು ಅವನ ಸಹಸ್ರಾರು ಅನುಯಾಯಿಗಳನ್ನೂ ಕೊಂದನು. ವಿದಿತಿ ಪುತ್ರನಾದ ಋಜುಶ್ವ ರಾಜನಿಗೆ ಸಹಾಯ ಮಾಡಲು 'ಪಿಪ್ರು' 'ಮೃಗಯ' ಎಂಬ ಅಸುರರನ್ನೂ ವಶಮಾಡಿಕೊಂಡು, ಐವತ್ತುಸಾವಿರ – ದಸ್ಯು – ಅಂದರೆ ಅಸುರರನ್ನು ನಾಶಮಾಡಿದನು. ಶಂಬರನ ಪಟ್ಟಣ ನಾಶಮಾಡಿ ಆದಿತ್ಯನ ಚಕ್ರವನ್ನು ಕತ್ತರಿಸಿದನು.

ಮರುತ್ತುಗಳ ಹಿತಕರ ಸಹೃತ್ತುಗಳಿಗೆ ಉದಕ ಅರ್ಪಿಸಿ, ಆ ಮರುತ್ತುಗಳ ವಾಗ್ರೂಪ ಧ್ವನಿಯಿಂದ ಪರ್ವತ ಮೇಘಗಳನ್ನು ಸೀಳಿದಾಗ ಅಂಗೀರಸ್ಸುಗಳ ಗೋಸ್ಥಾನ ತೆರೆಯಿಸಿದವು. 'ಸುರಮೆ'ಯು ಇಂದ್ರನ ಮುಂದೆ ಗೋವುಗಳನ್ನು ಪ್ರದರ್ಶಿಸಿದಳು.

ದ್ಯುಲೋಕದಿಂದ ಸತ್ಯಾತ್ಮಕವಾದ ಸಪ್ತರಶ್ಮಿಗಳನ್ನು ಸೃಷ್ಟಿಸಿ, ಈ ರಶ್ಮಿಗಳು ಮಾನವ ಜ್ಞಾನಕ್ಕೆ ಸಕಲ ವಿಷಯಗಳೂ ಗೋಚರಿಸುವಂತೆ ಮಾಡುತ್ತಾನೆ. ಕವಿಯು ಗಾಢವಾದ ರಹಸ್ಯ ತತ್ವ ಅರಿಯಲು ಮಾಡಬೇಕಾದ ಕರ್ತವ್ಯ ಸಾಧಿಸುತ್ತಾನೆ.

'ಉಷನಸ' ಋಷಿಯಂತೆಯೇ ಯಜಮಾನನೂ ಶಸ್ತ್ರರೂಪ ಸ್ತೋತ್ರ ಪಠಿಸುತ್ತಾನೆ.

ಅನುಗ್ರಹಾತ್ಮಕ ಸಖನಾಗಿ, ರಕ್ಷಕನಾಗಲಿ. ಅನೇಕ ಸಂವತ್ಸರಗಳಕಾಲ ಸ್ತುತಿಸುತ್ತಾ ಪ್ರಜ್ಞಾರೂಪ ಪರಿವರ್ತಿಸುತ್ತಿರುವಂತೆ, ಯಜಮಾನನನ್ನು, ಇಂದ್ರನು ಅನುಗ್ರಹಿಸಲಿ. ಇಷ್ಟಾರ್ಥಕ್ಕೆಗೂಡಿಸಿ ಯಜಮಾನನನ್ನು ಸ್ವತಂತ್ರ್ಯವಾಗಿ, ಬಿಟ್ಟುಬಿಡಲಿ. ಅನ್ನ ಧನಾಪೇಕ್ಷಿಗಳಿಗೆ ಪ್ರವಾಹದಂತೆ ಅನ್ನ ಧನಗಳನ್ನು ಕೊಟ್ಟು ಲೋಕಪಾಲಕನಾಗಿ, ಅಂತರಿಕ್ಷದಿಂದ ಉದಕಸುರಿಸಲಿ.

**ಸೂಕ್ತ - 17( ತ್ವಂ ಮಹಾ ಇಂದ್ರ ತುಭ್ಯಂ .....**

ಋಷಿ ವಾಮದೇವರು ಇಂದ್ರದೇವನನ್ನು ತ್ರಿಷ್ಟುಪ್ ಮತ್ತು ಏಕಪದಾ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಮಹತ್ವದಿಂದ ಕೂಡಿದವ, ಜನ್ಮಪಡೆದ ಸಕಲ ಪ್ರಾಣಿಗಳ ಪ್ರಭು, ದೇವಮಾನವ ಮುಖ್ಯ, ಅನೇಕರಿಂದಾಹ್ವಾನಿಕ, ಸ್ತುತಿಕರ್ತರ ಬಂಧು, ಅಪ್ರತಿಹತ ಧನವಂತ, ಸತ್ಯಾತ್ಮಕ ಧನದಾತ, ಸಕಲವಜ್ರಧಾರಿ.

ಯುದ್ಧಕಾಲದಲ್ಲಿ ಜನಿಸಿದ ಇಂದ್ರನು, ಅಪಹೃತ ಗೋವುಬಿಡಿಸಿದ, ಶತ್ರು ಭಯಂಕರ, ನಾನಾವಿಧ ಶಬ್ದಾತ್ಮಕ. ಭಕ್ತಿಯಿಂದ ಲೋಕವನ್ನೆಲ್ಲಾ ಆವರಿಸಿದವ. ದ್ಯುಲ್ಲೋಕ ಪೃಥ್ವಿಗಿಂತ ಮಹತ್ವದವ.

ಪ್ರಜಾಪತಿಯು, ಉತ್ತಮ ಪುತ್ರ – ಇಂದ್ರನನ್ನು ಸೃಷ್ಟಿಸುವ ಉತ್ತಮಕಾರ್ಯ ಮಾಡಿದನು. ಇಂದ್ರನು ಉತ್ಪತ್ತಿ ಕಾಲದಲ್ಲಿ ಕೋಪ ಭೀತಿಗಳಿಂದ ದ್ಯುಲ್ಲೋಕ ಭೂಲೋಕಗಳು ನಡುಗಿದವು. ಇಂದ್ರನು ಪ್ರಜಾಪತಿಯ ಸಹಾಯದಿಂದ,,,, ಜಗತ್ತನ್ನು ಸೃಷ್ಟಿಸಿ, ಜನನೀಜನಕರಿಂದ ಕೊಂಚ ಕೊಂಚ ಬಲವನ್ನು ಪಡೆಯುತ್ತಾ, ಜಗತ್ತಿನ ಬಲವನ್ನು ಪದೇ ಪದೇ ಪ್ರೇರೇಪಿಸಿ, ಭಯಗೊಂಡಿದ್ದ ಪ್ರಜೆಗಳ ರಕ್ಷಣೆಗಾಗಿ, ಪ್ರವಾಹತಡೆದಿದ್ದ ವೃತ್ರನನ್ನು, ವಜ್ರಾಯುಧದಿಂದ ಕತ್ತರಿಸಿ, ಉದಕದಿಂದ ತೃಪ್ತಿಗೊಳಿಸಿದನು.

ಇಂದ್ರನೊಬ್ಬನೇ ಸ್ವಸಾಮರ್ಥ್ಯದಿಂದ, ಯಾರಿಗೂ ಜಗ್ಗದ ಶತ್ರು ಸೇನೆಗಳನ್ನು ನಾಶಮಾಡುತ್ತಾನೆ. ಇಂದ್ರನು ಕೋಪ ಪ್ರಕಟಿಸಿದಾಗ, ಜಗತ್ತೇ ಭೀತಿಗೊಳ್ಳುತ್ತದೆ.

ಯುದ್ಧಕ್ಕೆ ಹೊರಟ 'ಏಕಶ ಋಷಿ' ಯನ್ನು ಇಂದ್ರನು ತಡೆದನು. ಸೂರ್ಯನ ಚಕ್ರಾಖ್ಯ ಆಯುಧವನ್ನು ಪ್ರೇರಿಸಿದನು; ಬೆಟ್ಟವನ್ನು ಸೀಳಿ ಅಸುರರನ್ನು ಕೊಂದು, ಮೇಘಸೀಳಿ ಉದಕಸುರಿಸಿ, ಅಡ್ಡಿ ಇಲ್ಲದೆ ನದಿಹರಿವಂತೆ ಮಾಡಿ, ದಗ್ಧಪ್ರದೇಶವನ್ನು ತಂಪುಮಾಡಿ, ಪ್ರಾಣಿಗಳ ದಾಹಅಡಗಿಸಿದನು. ಇದರಿಂದ ಇಂದ್ರನೂ ತಂಪುಗೊಂಡು ತೃಪ್ತಿಗೊಂಡನು.

ತನ್ನ ರಕ್ಷಣೆಯಲ್ಲಿರುವ ಸ್ತೋತೃಗಳ ಪಾಪವನ್ನು ಹೋಗಲಾಡಿಸಿ, ಅವರಲ್ಲಿ ಸಂಪತ್ತಿನ ಸಾಮರ್ಥ್ಯ ಇಡುತ್ತಾನೆ. ಅವರುಗಳು ಧನಾಭಾವದಿಂದ ನಶಿಸದಂತೆ, ಶತ್ರುಗಳ ಧನಕನಕಗಳನ್ನು ದಾನಮಾಡುತ್ತಾನೆ. ತೃಪ್ತಿಕಾರಕ ಮದಕಾರಕ ಸಮಸ್ತ ಸೋಮವನ್ನೂ ಪಾನಮಾಡಿ, ಅನ್ನದಾನಕ್ಕಾಗಿ ಯಜಮಾನನನ್ನೂ ಮತ್ತು ಸಕಲ ಪ್ರಜೆಗಳನ್ನೂ ಎತ್ತಿಹಿಡಿದಿದ್ದಾನೆ. ಆಜ್ಯಾದಿಗಳು ಅಗ್ನಿಯನ್ನು ತೃಪ್ತಿ ಪಡಿಸುವಂತೆ, ಮೇಘವೃಷ್ಟಿಯು ಇಂದ್ರನನ್ನು ತೃಪ್ತಿಗೊಳಿಸುತ್ತದೆ.

ತಪಃ ಕ್ಲೇಶವನ್ನು ಅನುಭವಿಸುತ್ತಾ, ಕರ್ಮಗಳಿಂದ ಪೂಜಿಸುತ್ತಾ, ಮೇಧಾವಿ ಸ್ತೋತೃ ಯಜಮಾನರು, ಇಂದ್ರನ ಸಖಿತ್ವಕ್ಕಾಗಿ, ಅವನ ಪ್ರೀತಿಪಾತ್ರರಾಗಲು ಅಪೇಕ್ಷಿಸುತ್ತಾರೆ. ಹಿಂದಿನ ಋಷಿಗಳು ಸ್ತುತಿಸಿದಂತೆಯೇ ಈ ಋಷಿಯೂ ಸತ್ಯರೂಪ ಸ್ತುತಿಸುತ್ತಾನೆ. " ದಯನೀಯವಾಗಿ ನೋಡುವ, ಇಂದ್ರ ಸಖಿತ್ವ ಇಚ್ಛಿಸುವವರಿಗೆ, ಇಂದ್ರನು ಸ್ನೇಹಿತನಾಗಿ, ರಕ್ಷಕನಾಗಿ ಇರಬೇಕೆಂದು ಇಂದ್ರನು ತಿಳಿಯಲಿ" – ಎಂದು ಯಜಮಾನನ ಅಪೇಕ್ಷೆ.

ಇಂದ್ರನು, ನೂತನ ಪ್ರಜ್ಞಾಯುತ ಸ್ತುತಿ ಹವಿಸ್ಸುಗಳನ್ನು ಅರ್ಪಿಸುವಂತೆ ಯಜಮಾನನಿಗೆ ಅನುಗ್ರಹಿಸಲಿ. ಮಹಿಮೆಯಿಂದ ಕೂಡಿದ ಕೀರ್ತಿಯನ್ನು ಉಂಟುಮಾಡಲಿ ರಕ್ಷಣೆ. ಸಖಿತ್ವ, ಸ್ವರ್ಗ, ಗೋ, ಅಶ್ವ, ಪಶ್ವಿ – ಇವನ್ನೆಲ್ಲಾ ಅಪೇಕ್ಷಿಸುವ ಯಜಮಾನನಿಗೆ ಸತ್ವಾತ್ಮಕ ಕರ್ಮ ಫಲದಾತನಾಗಿದ್ದು ಪ್ರವಾಹದಂತೆ ಅನ್ನತುಂಬಿಕೊಡಲಿ.

**ಸೂಕ್ತ - 18 (ಅಯಂ ಪಂಥಾ ಅನುವಿತ್ತಃ......**

ಋಷಿಃ – ವಾಮದೇವೋ ಗೌತಮಃ, ಇಂದ್ರಃ, ವಾಮದೇವಃ, ಅದಿತಿಃ, ಗರ್ಭಿಣೀ ವಾಮದೇವಸ್ಯ ಮಾತಾ.

ದೇವತಾಃ – ವಾಮದೇವಃ, ಇಂದ್ರಃ, ಆತ್ಮಶಂಸಾ ಇಂದ್ರೋವಾ.

ಛಂದಃ – ತ್ರಿಷ್ಟುಪ್.

ಸಮಸ್ತ ದೇವತೆಗಳಿಗೂ, ಮಾನವರಿಗೂ ಯೋನಿಯು ಉತ್ಪತ್ತಿ ಸ್ಥಾನವಾಗಿಯೇ ಇದೆ. ಗರ್ಭಸ್ಥನಾಗಿರುವ ವಾಮದೇವನಿಗೆ ಇಂದ್ರನು ಸೂಚಿಸುತ್ತಾನೆ 'ವಾಮದೇವನು ಪೂರ್ಣವಾಗಿ ಗರ್ಭದಲ್ಲಿ ಬೆಳೆದು ಲೌಕಿಕ ಉತ್ಪನ್ನ ಹೊಂದಿ, ತಾಯಿಯ ಮರಣಕ್ಕೆ ಕಾರಣವಾಗದೇ, ಗರ್ಭದಿಂದ ಹೊರಬರಲಿ' – ಎಂದು.

ಅತ್ಯಂತ ದುಃಖಪ್ರದ ಮಾರ್ಗದಿಂದ ತಾನು ಹೊರಬರುವುದಿಲ್ಲವೆಂದೂ, ಓರೆಯಾಗಿ ಪಾರ್ಶ್ವಮಾರ್ಗದಿಂದ ಹೊರಬರುವುದಾಗಿಯೂ ವಾಮದೇವನು ತಿಳಿಸಿ, ಒಬ್ಬನೇ ಶತ್ರುವಿನೊಂದಿಗೆ ಯುದ್ಧ, ಒಬ್ಬ ಪ್ರತಿಕಕ್ಷಿಯೊಂದಿಗೆ ವಾಗ್ವಾದದಂತಹ, ಯಾರೂಮಾಡದಂತಹ ಅನೇಕ ಕರ್ಮಗಳು ತನ್ನಿಂದಾಗಬೇಕಾಗಿದೆ – ಎಂದೂ ವಾಮದೇವ ಸಾರುತ್ತಾನೆ.

ಇಂದ್ರನಿಂದ, ತಾಯಿಮರಣದ ಸೂಚನೆ ಇದ್ದರೂ ಸಹ, ವಾಮದೇವನು, ತಾನು ಪುರಾತನ ಮಾರ್ಗ ಅನುಸರಿಸದೇ, ತನ್ನದೇ ಮಾರ್ಗ ಅನುಸರಿಸುವುದಾಗಿ ತಿಳಿಸಿ, ಇಂದ್ರನು ತ್ವಷ್ಟುವಿನ ಮನೆಯಲ್ಲಿ ಆಹ್ವಾನವಿಲ್ಲದೇ, ಸೋಮಪಾನ ಮಾಡಿದ 'ಅಕೃತ್ಯ'ವನ್ನು, ನೆನಪುಮಾಡಿದನು.

'ಅನೇಕ ಸಂವತ್ಸರಗಳ ಕಾಲ ಮಾತೃಗರ್ಭದಲ್ಲಿದ್ದು, ಇಂದ್ರನ ಕಾರ್ಯಗಳು ಲೋಕವಿರುದ್ಧವಾದವು' – ಎಂಬಮಾತಿಗೆ ಅದಿತಿಯು – 'ಈಗ ಉತ್ಪನ್ನವಾಗಿರುವ, ಮುಂದೆ ಆಗುವ, ದೇವತೆಗಳ ನಡುವೆ, ಇಂದ್ರನ ಸಮಾನರು ಯಾರೂ ಇಲ್ಲ' ಎನ್ನುತ್ತಾಳೆ. ಸೂತಿಕಾಗೃಹದಲ್ಲಿ

ಮೇಘವನ್ನು ಹಿಂಸಿಸಿ, ಉದಕಯುಕ್ತ ನದಿಗಳು ಹರಿಯುವಂತೆ ಮಾಡಿದುದು, ಇಂದ್ರನ ಮಹತ್ವವೇ. ಆದ್ದರಿಂದಲೇ 'ಅರಿಲಾ' ಎಂದು ಹರ್ಷಪೂರಿತ ಶಬ್ದದಿಂದ ನದಿ ಹರಿಯುತ್ತದೆ.

'ನಿವಿದ'ರೂಪ ಮಂತ್ರಗಳು ಇಂದ್ರ ಪ್ರಶಂಸಾತ್ಮಕವಾಗಿವೆ. ಉದಕಗಳು ಇಂದ್ರನ ಬ್ರಹ್ಮಹತ್ಯಾದಿ ದೋಷಗಳನ್ನೂ, ನೊರೆಯ ರೂಪದಲ್ಲಿ ಧರಿಸುತ್ತವೆ. ವೃತ್ರವಧೆಯ ನಂತರ ಇಂದ್ರನು, ಸ್ವತಂತ್ರ್ಯವಾಗಿ ಪ್ರವಾಹ ಹರಿವಂತೆ ಮಾಡಿದನು – ಎಂದು ಅದಿತಿ ಹೇಳುತ್ತಾಳೆ.

ಯುವತಿ ಅದಿತಿಯು, ಇಂದ್ರನನ್ನು ಹರ್ಷದಿಂದಲೇ ಹಡೆದಳು. 'ಕೃಷವಾ' ಎಂಬ ರಾಕ್ಷಸ ಸ್ತ್ರೀ ಇಂದ್ರನನ್ನು ನುಂಗಿ, ಅದರಿಂದಾದ ಹರ್ಷಾಧಿಕ್ಯದಿಂದ, ಇಂದ್ರೋತ್ಪನ್ನ ಉದಕೋತ್ಪನ್ನ ಸುಖಮುಖವಾದವು, ಇಂದ್ರನು ಸ್ವಶಕ್ತಿಯಿಂದ ರಾಕ್ಷಸಿಯನ್ನು ಭೇದಿಸಿ, ಹೊರಬಂದವನೆಂದು –ವಾಮದೇವನ ತಾಯಿ ಹೇಳಿದಳು.

ಇಂದ್ರನ ಕೆನ್ನೆಯ ಮೇಲೆ ರಾಕ್ಷಸ 'ವ್ಯಂಸ'ನು ಅಪ್ಪಳಿಸಿದಾಗ, ಇಂದ್ರನು ಅವನಿಗಿಂತ ಬಲವಾಗಿಬೆಳೆದು ವಜ್ರಾಯುಧದಿಂದ, ರಾಕ್ಷಸ ಶಿರಚ್ಛೇದಿಸಿದನು. ಇಂದ್ರನನ್ನು, ಅದಿತಿಯು ತನ್ನ ಸ್ವೇಚ್ಛಾಸಂಚಾರಕ್ಕಾಗಿ ಪಡೆದಳು.

ಅಗ್ನ್ಯಾದಿ ದೇವತೆಗಳ ಸಖ್ಯದಿಂದ, ವಿಷ್ಣುವಿನ 'ಸುಹೃತ್ತ'ದಿಂದ ಇಂದ್ರನು ಅಧಿಕಪರಾಕ್ರಮಿ ಆಗಿದ್ದಾನೆ. ಇಂದ್ರನು ಮಲಗಿದ್ದಾಗ, ಸಂಚರಿಸುತ್ತಿದ್ದಾಗ ಇಂದ್ರನನ್ನು ಕೊಲ್ಲಲು ಸಾಧ್ಯವಿಲ್ಲ. ತಂದೆಯನ್ನು ಕಾಲೆಳೆದು ಸಾಯಿಸಿ, ತಾಯಿಗೆ ವೈಧವ್ಯತಂದ –ಇಂತಹ ಕಾರ್ಯ ಇನ್ನಾರಿಂದಲೂ ಸಾಧ್ಯವಿಲ್ಲ. ಪ್ರಜೆಗಳಿಗೆ ಸುಖತರಲು ಇತರ ದೇವತೆಗಳು, ಇಂದ್ರನಿಗಿಂತಲೂ ಹೆಚ್ಚುಶಕ್ತರಲ್ಲ.

ವಾಮದೇವನು ದಾರಿದ್ರ್ಯದಿಂದಾಗಿ, ನಾಯಿಯ ಕರುಳನ್ನು ಪಾಕಮಾಡಿದ, ಸ್ವಂತ ಪತ್ನಿಯನ್ನೇ ಅನುಭಾವಿಕಳನ್ನಾಗಿಮಾಡಿದ. ಆದರೆ ಸುಖಕರ ಪ್ರಕಾಶಕ ದೇವತೆಗಳ್ಯಾರೂ ಬರಲಿಲ್ಲ. ನಂತರದಲ್ಲಿ ಇಂದ್ರನು ಶೀಘ್ರಗಾಮಿ ಮಾಧುರ್ಯಪೂರ್ಣ ಉದಕವನ್ನು ಕೊಟ್ಟನು.

## ( ಅಷ್ಟಕ - 3, ಅಧ್ಯಾಯ - 6 )

### ಸೂಕ್ತ - 19 (ಏವಾ ತ್ವಾಮಿಂದ್ರ ವಜ್ರಿನ್ನತ್ರ.......

ಋಷಿ ವಾಮದೇವರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನ ಕಾರ್ಯಗಳು ಮಾನವ ಹಿತಕಾರಿಯಾದವು. ಇದನ್ನು ತಿಳಿದಮಾನವನು ಇಂದ್ರನನ್ನು ಪ್ರಶಂಸಿಸುತ್ತಾನೆ.

ರಾಜರುಗಳಾದ, 'ಕುವತಿ' ಮತ್ತು 'ವಯ್ಯ' ಇವರುಗಳಿಗೆ, ಅನುಕೂಲವಾಗುವಂತೆ, ವಿಶ್ವತೃಪ್ತಿದಾಯಿ, ಇಷ್ಟಾರ್ಥದಾಯಿ, ಭೂಮಿಯನ್ನು ಅನ್ನ ಉದಕಗಳಿಂದ ತುಂಬಿದ; ನದಿಗಳಿಂದ ತುಂಬಿದ.

'ಅಗ್ರೋ' ಎಂಬುವಳ ಕುರುಡು ಮಗನನ್ನು, 'ವಮ್ರಿ' ಎಂಬ ಇರುವೆಗಳ ಕಡಿತದಿಂದ ತಪ್ಪಿಸಿದ, ಮತ್ತು ಕಡಿತದಿಂದ ಛಿನ್ನವಾಗಿದ್ದ ಶರೀರವನ್ನು ಸರಿಪಡಿಸಿದ. ಕುರುಡನು ಸರ್ವವನ್ನೂ ಗುರ್ತಿಸುವಂತೆಮಾಡಿದ

ತನ್ನ ಬಲದಿಂದಲೇ ವೀರ್ಯವನ್ನು ಪ್ರಕಟಿಸಿ, ಉದಕವನ್ನು ಆಪ್ಲಾದಿಸಿ, ಸುರಿಸಿ, ಪರ್ವತ ಮತ್ತು ಪರ್ವತ ಶಿಖರಗಳನ್ನು ಸೀಳಿಹಾಕಿ, ಬೆಂಗಾಡಾಗಿದ್ದ ಭೂಮಿಯನ್ನು ನದಿಗಳಿಂದ ತುಂಬಿ, ಫಲವತ್ತಾದ ಅನ್ನೋದಕ ಉಂಟಾಗುವಂತೆ ಮಾಡಿದ. ಬಳಲಿದ ಮಾರ್ಗಯಾಸಿಗಳಿಗೆ ತೃಪ್ತಿತರುವ ಉದಕಪರಿಸಿದ. ಅಸುರರ ಹಿಡಿತಕ್ಕೆ ಸಿಕ್ಕಿದ, ಬಂಜೆಹಸುಗಳಲ್ಲಿ ಕ್ಷೀರ ತುಂಬುವಂತೆಮಾಡಿದ. ತಮಸ್ಸುಗಳಿಂದ ಮುಚ್ಚಿದ್ದ ಅನೇಕ ಉಷಸ್ಸುಗಳನ್ನು ಬಿಡಿಸಿ, ಪ್ರಕಾಶಗೊಳಿಸಿದ.

ವೃತ್ರನು ತೃಪ್ತಿ ಇಲ್ಲದ ಭೋಗಿ; ಶಿಥಿಲಾಂಗದವ, ವಂಚಕ, ಆಲಸಿ, ಸುಪ್ತಾವಸ್ಥೆಯಲ್ಲಿ ಉದಕಕ್ಕೆ ಅಡ್ಡಿಪಡಿಸಿ ಮಲಗಿದ್ದ. 'ಇಂದ್ರನೊಬ್ಬನೇ ವೃತ್ರಹನನಕ್ಕೆ ಶಕ್ತ' ಎಂದು ಸಕಲ ದೇವತೆಗಳಿಗೂ ದ್ಯಾವಾಪೃಥಿವಿಗಳಿಗೂ ಇದ್ದ ನಂಬಿಕೆ. ಇದರಂತೆ ದೇವತೆಗಳು ಪ್ರೇರಿಸಿದ್ದರಿಂದ, ಪೂರ್ಣಮಾಸ್ಯ ದಿನದಂದು, ವಜ್ರಾಯುಧದಿಂದ ವೃತ್ರನನ್ನೂ ಸೀಳಿ ನಾಶಪಡಿಸಿದ. ಲೋಕಪ್ರೀತಿಕರ ನದಿಗಳನ್ನು ಸೀಳಿ, ಸುಲಭವಾಗಿ ಹರಿವಂತೆ ಮಾಡಿ, ಬಂದಿತ ವೃಷ್ಟಿ ಉದಕಗಳನ್ನು ಪೃಥ್ವಿಯ ಮಾರ್ಗ ಸಂಚರಿಸುವಂತೆ ಮಾಡಿದ.

ಮರುತ್ತುಗಳೂ ಇಂದ್ರನೊಂದಿಗೆ ಸೇರಿ ವೇಗವಾಗಿ ಮುನ್ನುಗ್ಗಿ ಮೇಘಸೀಳಿ, ನದಿಗಳು ನೀರಿನಿಂದ ತುಂಬಿ, ಹರಿಯುವಂತೆ ಮಾಡಿದರು.

ಹಿಂದಿನ ಋಷಿಗಳಿಂದ ಸ್ತುತಿತನಾದಂತೆ, ಈ ಯಜಮಾನನಿಂದಲೂ ನೂತನ ಸ್ತುತಿಗಳಿಂದ, ಪ್ರಜ್ಞಾಪೂರ್ವಕವಾಗಿ, ಪೂಜೆಹವಿರರ್ಪಿಸಿ, ಅನ್ನಕ್ಕಾಗಿ ಸ್ತುತಿಸಿ, ಪೂಜಿಸುತ್ತಾರೆ.

**ಸೂಕ್ತ - 20 (ಆ ನ ಇಂದ್ರೋ ದೂರಾದಾ ನ.....**

ಋಷಿ ವಾಮದೇವರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ವಜ್ರಾಯುದಿ, ಆಯುಧದಿಂದ ಪ್ರಕಾಶಿತ, ಹರಿಸಂಜ್ಞಕ ಅಶ್ವಗಳುಳ್ಳವ, ಪೂಜಕ, ಧನಗೃಹಗಳಿಗೆಲ್ಲಾ ಈಶ್ವರ, ಅಪ್ರತಿಹತ ಶಕ್ತಿಯಿಂದಲೇ ಉತ್ಪನ್ನನಾದ ಇಂದ್ರನವಿರೋಧಕ ಶಕ್ತರು ಯಾರು ಇಲ್ಲ. ಇಂದ್ರದತ್ತ ಯಜ್ಞಧನ ನಾಶ – ಮಾಡುವವರೂ ಇಲ್ಲ.

ಪ್ರಾಜ್ಞ ಇಂದ್ರನು, ಪ್ರಜ್ಞೆಯ ಸ್ವರೂಪ ಪ್ರಜ್ಞಾಶಕ್ತಿಯಿಂದ ಹವಿರರ್ಪಿಸುವವರಾದ ಯಜಮಾನರ ಪಾಪವು – ಅತ್ಯಧಿಕವಾಗಿದ್ದರೂ – ಪೂರ್ಣವಾಗಿ ನಾಶವಾಗುತ್ತದೆ; ಧನ ಉಂಟಾಗುತ್ತದೆ.

ಹಿಂದಿನ ಋಷಿಗಳಂತೆಯೇ, ಅಭಿಮಾನ, ಶ್ರದ್ಧೆ, ಪ್ರಜ್ಞೆಯಿಂದ ಹವಿರರ್ಪಿಸಿ ನಿಷ್ಕೇವಲ್ಯಾಖ್ಯವಾದ ಶಸ್ತ್ರಗಳಿಂದ ಯಜಮಾನರು ಸ್ತುತಿಸುತ್ತಾರೆ.

ಹತ್ತಿರ – ದೂರ, ಎಲ್ಲಿ ಇದ್ದರೂ ಓಜಸ್ವಿ ಮರುತ್ತುಗಳೊಡನೆ, ಯುದ್ಧದಲ್ಲಿ ರಕ್ಷಣೆ ಕೊಡುತ್ತಾ, ಯಜ್ಞ ಉದ್ದೇಶಿಸಿ, ಖಂಡಿತಾ ಬರಲಿ; ಯಜಮಾನ ಸಮೀಪ ಕುಳಿತು ಶೀಘ್ರವಾಗಿ ಸೋಮಪಾನ ಮಾಡಿ ತೃಪ್ತನಾಗಲಿ. ಇಂದ್ರನು ಸ್ತೋತೃಗಳನ್ನು ಮುಂದೆ ಇಟ್ಟುಕೊಂಡು

ಪ್ರಭೂತಪ್ರೂರ್ಣ ಪಶ್ವಾದಿ, ಧನ ಅನ್ನ ಕೊಟ್ಟು ಪೋಷಕನಾಗಿದ್ದು, ಯಜಮಾನನ ಶತ್ರುಗಳನ್ನು ಜಯಿಸಲಿ.

**ಸೂಕ್ತ - 21 (ಆ ಯಾತ್ವಿಂದ್ರೋವಸ .....**

ಋಷಿ ವಾಮದೇವರು ಇಂದ್ರದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಜಗತ್ಪತ್ಯ ಪ್ರಜಾಪತಿಯ ಪುತ್ರ – ಇಂದ್ರ, ಸೂರ್ಯನಂತೆ, ಯಜ್ಞದಲ್ಲಿ ಬಹುಪ್ರಕಾಶಕ ಯಜಮಾನಾರಾಧಕ, ಅನೇಕರಿಂದ ಶಸ್ತ್ರರೂಪ ಸ್ತೋತ್ರ ಸ್ತುತಿಸಲ್ಪಡುವವ. ಅಧಿಕ ಬೆಲೆಯ ಧನಕ್ಕೆ ಪ್ರಭು. ಪ್ರಾಣರೂಪ ಬಲದಿಂದ ಶತ್ರುಸೇನೆ ಜಯಿಸುವವ. ಶತ್ರುಹೋರಾಟದಲ್ಲಿ ಯಜಮಾನನ ರಕ್ಷಕ.

ಯಜ್ಞಸೂಚಕ, ಘರ್ಜನವಾಕ್ ಉತ್ಪನ್ನಕಾರಕನಾದ ಇಂದ್ರನು, ಸಕಲ ಲೋಕಗಳನ್ನೂ ಸುಭದ್ರ ತಳಹದಿಯ ಮೇಲೆ, ಶಾಶ್ವತವಾಗಿನಿಲ್ಲಿಸುವವ.

ಮೇಘದ್ವಾರ ತೆಗೆದು, ಉದಕಪ್ರವಾಹ ತುಂಬಿದ, ಇಂದ್ರನ ಗೌರಾಖ್ಯ ಗವಯಾಖ್ಯ ಮೃಗಗಳ ಗುಹಾರೂಪ ಗೃಹದಲ್ಲೇ, ಅನ್ನವನ್ನು ಯಜಮಾನನು ಕಂಡದ್ದು ಸತ್ಯವೇ.

ಸ್ತುತಿಸುವ ಯಜಮಾನರಲ್ಲಿ ಇಂದ್ರನ ಒಲವು ರಕ್ಷಿತ. ಅವರ ಹೃದಯದಲ್ಲೇ ಧ್ಯಾನರೂಪದಲ್ಲಿ ಪೋಷಿತವಾಗುತ್ತದೆ. ಯಜಮಾನನ ಗೃಹದಲ್ಲಿ ಅವನ ಸಕಲಕಾರ್ಯಗಳಿಗೂ ಸಹಾಯಕಾರಿಯಾಗಿ, ಇಷ್ಟಾರ್ಥಸಾಧಕನಾಗಿ ಹರ್ಷತನಾಗಿರಲು ಸಾಧ್ಯ –ಎಂಬುದು ಉತ್ಪ್ರೇಕ್ಷೆ ಅಲ್ಲ.

ಕಲ್ಯಾಣ ಕಾರಕ ಇಂದ್ರನ ಹಸ್ತಗಳು, ಶ್ರೇಷ್ಠಕರ್ಮ ಮಾಡತಕ್ಕವು, ಸ್ತೋತೃ ಯಜಮಾನನಿಗೆ ಧನಕೊಡತಕ್ಕವು. ಆದರೂ ಯಜಮಾನನನ್ನು ಹರ್ಷಗೊಳಿಸದೆ, ಧನಕೊಡದೆ ಇರುವುದು –ಇಂದ್ರನ ಎಂತಹ ಸ್ಥಿತಿ? –ಎಂಬುದು ಯಜಮಾನನ ಪ್ರಶ್ನೆ.

ಇಂದ್ರನಿಗಾಗಿ, ನೂತನಸ್ತುತಿ ನಿರ್ಮಿತವಾಗುತ್ತದೆ. ಹವಿಸ್ಸಿನ ರೂಪ ಅನ್ನಕ್ಕೆ ಬದಲಾಗಿ ಪುಷ್ಟಿರೂಪ ಅನ್ನ, ಯಜಮಾನನಿಗೆ ದೊರೆಯುತ್ತದೆ. ಪಶ್ವಾದಿ ಧನ ದೊರೆಯುತ್ತದೆ.

ಹಿಂದಿನ ಋಷಿಗಳಂತೆಯೇ, ಶ್ರದ್ಧೆ ಪ್ರಭೂತ ಸ್ತೋತ್ರಗಳಿಂದ, ರಥವಂತ ಯಜಮಾನನು ಇಂದ್ರನನ್ನು ಪೂಜಿಸುವಂತಾಗಲಿ. ಹವಿರರ್ಪಿಸುವಂತಾಗಲಿ.

ಪೃಥ್ವಿ, ಅಂತರಿಕ್ಷ, ದ್ಯುಲ್ಲೋಕ, ಆದಿತ್ಯಸ್ಥಾನ, ಮೇಘ, ಉದಕಮಧ್ಯ ಅತ್ಯಂತ ದೂರ – ಎಲ್ಲಿದ್ದರೂ, ಮರುತ್ತುಗಳೊಡನೆ, ಇಂದ್ರನು ಯಜಮಾನನ ಸಮೀಪ ರಕ್ಷಣಾರ್ಥಬರಲಿ.

ಯಜ್ಞದಿಂದ ಇಂದ್ರನ ತೇಜೋಮಯ ಬಲವೃದ್ಧಿಸಲಿ. ಸ್ತೋತ್ರಗಳ ಅಭಿಮುಖನಾಗಿ ಅವರಿಗೆ ಅನ್ನ ಧನ ಕೊಡಲಿ. ಆ ಇಂದ್ರನಿತ್ತ ದೈವೀಕ ಅನ್ನವನ್ನು ಯಜಮಾನರು ಭುಜಿಸುವಂತಾಗಲಿ.

**ಸೂಕ್ತ - 22 (ಯನ್ನ ಇಂದ್ರೋ ಜುಜುಷೇ ಯಚ್ಚ ವಷ್ಟಿ......**

ಋಷಿ ವಾಮದೇವರು ಇಂದ್ರ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನು ಉತ್ಪನ್ನನಾದೊಡನೆಯೇ ಅತಿಶಯಗುಣ ಮಹತ್ವದ ಅನ್ನ ಪಡೆದನು. ಇವನ ಅದ್ಭುತ ಸ್ವರೂಪ ನೋಡಿ ಸಮುದ್ರ, ಪರ್ವತ, ದ್ಯುಲ್ಲೋಕ, ಪೃಥಿವಿಗಳೂ ಹೆದರಿದವು. ಇಂದ್ರನ ಮನಸ್ಸಿಂದ ಸಕಲಕರ್ಮಗಳೂ ಸತ್ಯಾತ್ಮಕವಾಗಿರುತ್ತವೆ. ಸೂರ್ಯನ ಮಾತಾಪಿತೃ – ದ್ಯಾವಾಪೃಥಿವಿಗಳ – ಭಾರವನ್ನು ಇಂದ್ರನೇ ವಹಿಸಿದ್ದಾನೆ.

ನಾಲ್ಕು ಹರಿತ ಅಲಗುಗಳ ವಜ್ರಾಯುಧ, ಇಂದ್ರವೈರಿಗಳ ಮೇಲೆಬಿದ್ದಾಗ ಭೂಲೋಕ, ದ್ಯುಲ್ಲೋಕಗಳು ಕಂಪಿಸಿದವು. ಧೇನುಗಳು ಹಾಲುಕೊಡುವುದೂ, ನದಿಗಳು ಪ್ರವಹಿಸುವುದೂ, ಇಂದ್ರನ ಭಯದಿಂದಲೇ. ವೃತ್ರ ಬಂಧಿತ ನದಿಗಳು, ಸ್ವಚ್ಛಂದವಾಗಿ ಹರಿಯುತ್ತಾ, ಇಂದ್ರನನ್ನು ಸ್ತುತಿಸುತ್ತವೆ.

'ಪರುಷ್ಣಿ' ನದಿಯು ಆ ಪ್ರದೇಶದೆಲ್ಲೆಲ್ಲಾ ವ್ಯಾಪಿಸಿ, ಸಂಪತ್ ಸಮೃದ್ಧಿಕೊಡುವಂತೆ, ಲೋಕೋಪಕಾರ ಮಾಡಿದ ಇಂದ್ರನು, ಇತಿಶಯಸ್ತುತಿತನಾಗಿದ್ದಾನೆ.

ಇಂದ್ರನ ಮಹತಕಾರ್ಯಗಳು, ಇಂದ್ರನಿಗಿಂತಲೂ ಮಹತ್ವಪಡೆದವು. ವಾಯುವು ಮಾನವರಂತೆ ಶಬ್ದ ಮಾಡುತ್ತಾ, ಅಂತರಿಕ್ಷ ಸಂಚಾರಿ ಆಗಿದ್ದಾನೆ.

ಹಿಂದಿನ ಋಷಿಗಳಂತೆಯೇ ಈ ಋಷಿಯೂ ಶ್ರದ್ಧೆ, ಪ್ರಜ್ಞಾಪೂರ್ವಕವಾಗಿ ನೂತನ ಶಸ್ತ್ರ ಮಂತ್ರಗಳಿಂದ ಪೂಜಿಸುತ್ತಾನೆ. ಹವಿಸ್ಸು ಪುರೋಡಾಶ ಸೋಮರಸ ಸೇವನೆಗೆ, ಇಂದ್ರನು ಬರಲಿ.

ಸೋಮರಸವು, ಇಂದ್ರಾಭಿಮುಖ ಹರಿದುಬರಲಿ. ಇಂದ್ರನು ಇತರರಸ್ತುತಿ ಅಲಕ್ಷಿಸಿ, ಯಜಮಾನಸ್ತುತಿ ಕೇಳಲಿ. ಪ್ರಜ್ಞಾಪೂರ್ವಕವಾಗಿ ಇಂದ್ರನನ್ನು ಸ್ತುತಿಸುವಂತಾಗಲು, ಯಜಮಾನನಿಗೆ ಬುದ್ಧಿ ಪ್ರೇರಣೆ ಮಾಡಲಿ. ಆಕರ್ಷಕ ಅನ್ನ ತುಂಬಿಕೂಡಲಿ. ಕಲ್ಯಾಣ ಉಂಟುಮಾಡಲಿ.

ಮಾನವಶತ್ರುಗಳನ್ನೂ, ವಧಾರ್ಹರನ್ನು, ಅವರ ಆಯುಧಗಳನ್ನು, ಇಂದ್ರನು ನಾಶಮಾಡಲಿ.

ಸ್ತುತಿಕರ್ತನ ಸಂಬಂಧಿ ಇಂದ್ರನು, ಸ್ತುತಿಸುವ ಶಕ್ತಿಯನ್ನು ಯಜಮಾನನಿಗೆ ಕೊಡಲಿ. ಆ ಶಕ್ತಿಯು ಯಜಮಾನನನ್ನು, ಭದ್ರವಾಗಿ ಹಿಡಿದಿರಲಿ.

**ಸೂಕ್ತ - 23 (ಕಥಾ ಮಹಾಮವೃಧತ್ ಕಸ್ಯ ಹೋತುರ್ಯಜ್ಞಂ.....**

ಋಷಿ ವಾಮದೇವರು ಇಂದ್ರ ಮತ್ತು ಋತುದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನ ಶರೀರ ಎಲ್ಲರಿಂದಲೂ ಆದರಣೀಯವಾದ್ದು, ಇಂದ್ರಕರ್ಮಗಳು ಸಕಲ ಸ್ತೋತೃಗಳ ಶ್ರೇಯಸ್ಸಿಗೆ ಕಾರಣ, ಯಜಮಾನನ ಋಣ, ಋಣದಭಯ – ಇವನ್ನು, ಅವರ ಗೋಚರಕ್ಕೇ ಬಾರದಂತೆ, ತನ್ನ ಭಯಂಕರ ಶಕ್ತಿಯಿಂದ ದೂರತಳ್ಳಿ, ಯಜಮಾನನನ್ನು ರಕ್ಷಿಸುತ್ತಾನೆ. ತನ್ನನ್ನು ಪೂಜಿಸದ, ಹಿಂಸಕ, ದ್ರೋಹಿ, ರಾಕ್ಷಸಿ, – ಇವರನ್ನು ಕೊಲ್ಲಲು ಇಂದ್ರನು ತನ್ನ ಆಯುಧಹರಿತ ಮಾಡಿಕೊಳ್ಳುತ್ತಾನೆ. ಇಂದ್ರನ ಈ ವಿಷಯಗಳು ಯಜಮಾನನಿಗೆ ತಿಳಿಯದಾಗಿದೆ.

ಇಂದ್ರನ ದಾನದ ಪ್ರಾಕಾರಗಳೇನು? ಸ್ತೋತೃವಿನ ಅಪೇಕ್ಷೆಗಳನ್ನು ಯಾವರೀತಿ ಪೂರೈಸಬಲ್ಲ? ಯಾವರೀತಿ ಇಂದ್ರನ ಸಖೀ ಭೂತಕರ್ಮ ಪ್ರಕಾಶಿಸುತ್ತದೆ? ಯಾರು ಇಂದ್ರನ ಅನುಗ್ರಹ

ಬುದ್ಧಿಪಡೆಯುತ್ತಾರೆ? ಯಾವ ಸ್ತುತಿಗಳು ಇಂದ್ರನನ್ನು ಪ್ರವೃದ್ಧನಾಗುವಂತೆ ಮಾಡುತ್ತವೆ? ಸ್ತುತಿಸುವ ಯಜಮಾನನಿಗೆ ದೊರೆವ ರಕ್ಷಣೆಗಳೇನು? ಯಾವಾಗ ಇಂದ್ರನು ಯಜಮಾನನ ವೃದ್ಧಿ, ರಕ್ಷಣೆಗೆ ಪ್ರತ್ಯಕ್ಷನಾಗುತ್ತಾನೆ? ಯಾವ ಯಜಮಾನನಿಗೆ ಇಂದ್ರನು ಧನಕೊಡುವವನಾಗಿದ್ದಾನೆ? ಆಕರ್ಷಕಧನ ಯಾವಾಗ ತಿಳಿಯಲ್ಪಡುತ್ತದೆ? ಯಾವಪ್ರಕಾರದಲ್ಲಿ ಇಂದ್ರನ ಆಕರ್ಷಕ ಮಹದೈಶ್ವರ್ಯವನ್ನು ಯಜಮಾನನು ಕೇಳುತ್ತಾನೆ? ಶತ್ರುಪೀಡಿತನಾಗಿದ್ದಾಗ್ಯೂ ಸ್ತುತಿಸುವ ಯಜಮಾನನು, ಯಾವರೀತಿ ಪಶ್ವಾದಿ ಧನ ಹೊಂದುತ್ತಾನೆ? ಯಾವ ವೀರಪುರುಷನು ಇಂದ್ರನ ಸಹಾಯವನ್ನು ಯುದ್ಧದಲ್ಲಿ ಪಡೆಯುತ್ತಾನೆ?

ಇಂದ್ರನ ಭ್ರಾತೃಕರ್ಮಗಳನ್ನು ಯಾವಾಗ ಪ್ರಶಂಸಿಸಬೇಕು? ಶತ್ರುನಾಶಕ ಇಂದ್ರನ ಭ್ರಾತೃಕರ್ಮಗಳನ್ನು ಸ್ತೋತೃಗಳಿಗೆ ಪ್ರಶಂಸಿಸಿ ಹೇಳಬಹುದೇ? ಯಾವ ರೀತಿ ಕರ್ಮಗಳಿಂದ ಇಂದ್ರನು ಸಹಾಯಮಾಡುತ್ತಾನೆ?

ಉಷಃಕಾಲದಲ್ಲಿ ಹವಿಸ್ಸು ಸ್ತುತಿ ಸ್ತೋತ್ರಗಳನ್ನು ಅರ್ಪಿಸುವ ಯಜಮಾನನನ್ನು ಇಂದ್ರನು ತಿಳಿಯುವಂತಾಗಲಿ.

ಋತುದೇವನು ಉತ್ತಮ ರೂಪದವ, ದೃಢಲೋಕಾಧಿಕಾರಿ, ಆಹ್ಲಾದಕರ. ಇವನಸ್ತುತಿ ಪಾಪನಾಶಕ; ಕಿವುಡನ ಕಿವಿತೆರಸಿ, ಶ್ರವಣ ಶಕ್ತಿಕೊಡುವಂತಹದು. ಇವನ ಸಹಾಯದಿಂದಲೇ ಧೇನುಗಳು ಯಜ್ಞಪ್ರವೇಶಿಸುವುದು; ಯಜಮಾನನು ಅನ್ನಪಡೆಯುವುದು. ಯಜಮಾನನ ಸ್ತುತಿಗಳಿಂದ ಋತುದೇವನ ಬಲವು ವೇಗವಾಗಿ ಬೆಳೆಯುತ್ತದೆ. ವೃಷ್ಟಿ ಅಪೇಕ್ಷೀ ಋತುದೇವನಿಗಾಗಿ ವೃಷ್ಟಿಸುರಿಯುತ್ತದೆ.

ಹಿಂದಿನ ಋಷಿಗಳಂತೆಯೇ, ಯಜಮಾನರು ನೂತನ ಸ್ತುತಿಗಳಿಂದ ಸ್ತುತಿಸುತ್ತಾರೆ. ಯಜಮಾನನಿಗೆ ಅನ್ನ ತುಂಬಿಕೊಡಲಿ.

**ಸೂಕ್ತ - 24 (ಕಾ ಸುಷ್ಟುತಿಃ ಶವಸಃ.......**

ಋಷಿ ವಾಮದೇವರು ಇಂದ್ರನನ್ನು ತ್ರಿಷ್ಟುಪ್ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವೃಷ್ಟ್ಯರ್ಥಕರ್ಮಮಾಡುವ ಯಜಮಾನರು, ಯುದ್ಧ ಪ್ರಾಪ್ತವಾದಾಗ ಇಂದ್ರನನ್ನು ಸಹಾಯಕ್ಕೆ ಅಪೇಕ್ಷಿಸುತ್ತಾರೆ. ಸ್ತುತಿ, ಸೋಮ, ಹವಿಸ್ಸು, ಪುರೋಡಾಶಗಳನ್ನು ಅಪೇಕ್ಷಿಸುವ ಇಂದ್ರನಿಗಾಗಿ, ಭಕ್ಷಣ ಯೋಗ್ಯಮಾಡಿ ಅರ್ಪಿಸುತ್ತಾರೆ. ತಪಸ್ಸಿಂದ ಕೃಶರಾಗುತ್ತಾರೆ. ಸೋಮ ಹಿಂಡದಿರುವವರಿಂದ, ಬೇರೆಯಾಗಿ ಯಾಗಮಾಡುತ್ತಾ, ಇಂದ್ರನನ್ನು ಶ್ಲಾಘಿಸುತ್ತಾ ಯುದ್ಧದಲ್ಲಿ ಸಹಾಯ ಅಪೇಕ್ಷಿಸಿ, ಇಂದ್ರಮಿತ್ರರಾಗುತ್ತಾರೆ.

ಕೆಲವು ಯೋಧರು, ಯುದ್ಧಪ್ರಾಪ್ತವಾದಾಗ, ಸಹಾಯಾರ್ಥ, ಇಂದ್ರನನ್ನು ಪೂಜಿಸಿಸುತ್ತಾರೆ. ಒಡನೆಯೇ ಶತ್ರುಗಳನ್ನು, ಸಾಯಿಸಬೇಕಾದವರನ್ನೂ, ಅರಿತ ಇಂದ್ರನನ್ನೂ, ಆಸಕ್ತಿಯಿಂದ ಯುದ್ಧ ವೀಕ್ಷಿಸುತ್ತಿರುವ ಇಂದ್ರನ ಪತ್ನಿ ತನ್ನ ಅಭಿಮುಖ ಮಾಡಿಕೊಳ್ಳುತ್ತಾಳೆ.

ಅಪೇಕ್ಷಿತ ಸೋಮ ಸ್ತುತಿ ಹವಿಸ್ಸುಗಳನ್ನು ಸ್ವೀಕರಿಸಿ ಯಜಮಾನನಲ್ಲಿ, ಕಾಮವರ್ಷದ ಬಲ ಉಂಟುಮಾಡಿ, ಸ್ವರ್ಗದಿಂದಲೇ ಪೂರ್ಣ ಧನಕೊಟ್ಟು ರಕ್ಷಕನಾಗಿರುತ್ತಾನೆ.

ಹಿಂದಿನ ಋಷಿಗಳಂತೆಯೇ, ಅದೇ ಶ್ರದ್ಧೆಯಿಂದ ಇಂದ್ರನಿಗಾಗಿಯೇ, ಸಿದ್ಧವಾದ ನೂತನ ಸ್ತುತಿಗಳಿಂದ ಸ್ತುತಿಸುತ್ತಾನೆ. ಪುತ್ರಪೌತ್ರ ಧನ ಅನ್ನಗಳನ್ನು ಇಂದ್ರನು ಯಜಮಾನನಿಗ ಕೊಡಲಿ.

ಸಮರ್ಥರಾಗಲೀ, ಅಸಮರ್ಥರಾಗಲೀ, ಪದಾರ್ಥಗಳ ಕ್ರಯದಕಾಲದಲ್ಲಿ ಮಾತನಾಡಿ ನಿಷ್ಕರ್ಶೆ ಮಾಡಿದ ಬೆಲೆಯನ್ನು ಮಾತ್ರಾ ಪಡೆಯಬೇಕು. ಪ್ರೀತಿಯಿಂದ, ದಶಸಂಖ್ಯಾಕ ಸ್ತುತಿಯಿಂದ ಭಕ್ತನು ಇಂದ್ರನನ್ನು ಕೊಂಡುಕೊಳ್ಳುತ್ತಾನೆ. ಅವನೊಂದಿಗೆ 'ಸಮಯ'ವನ್ನು ಮಾಡಿಕೊಳ್ಳುತ್ತಾನೆ.

ಇಂದ್ರಭಕ್ತನು ತಾತ್ಕಾಲಿಕವಾಗಿ ಇಂದ್ರನನ್ನು ಕೊಂಡಿದ್ದಾನೆ. ತನ್ನ ಶತ್ರುಗಳನ್ನು ನಾಶಪಡಿಸಿದೊಡನೆಯೇ, ಇಂದ್ರನನ್ನು ಯಜಮಾನರಲ್ಲಿಗೆ ಕಳಿಸಿಕೊಡಬೇಕು.

ಯಾವಸ್ತುತಿಯಿಂದ ಇಂದ್ರನನ್ನು ಯಜಮಾನನಲ್ಲಿಗೆ ಅಭಿಮುಖ ಮಾಡಿಕೊಳ್ಳಬಹುದು?

## ಸೂಕ್ತ - 25 (ಕೋ ಅದ್ಯ ನರ್ಯೋ ದೇವಕಾಮ....

ಋಷಿ ವಾಮದೇವರು ಇಂದ್ರ ದೇವನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಉತ್ಕೃಷ್ಟರು, ನಿಕೃಷ್ಟರು, ಮಧ್ಯಮವರ್ಗದವರು, ಕಾರ್ಯಸಿದ್ಧಿ ಅಪೇಕ್ಷಿತರು, ಕುಳಿತವರು, ಗೃಹವಾಸಿಗಳು, ಅನ್ನಾಪೇಕ್ಷಿಗಳು, ಶತ್ರುಗಳೊಡನೆ ಯುದ್ಧಮಾಡುವವರೂ – ಸಕಲಮಾನವವರ್ಗವೂ, ಇಂದ್ರನ ಸಹಾಯ ಅಪೇಕ್ಷಿಸಿ ಪ್ರಾರ್ಥಿಸಿ ಕರೆಯುತ್ತಾರೆ. ಇಂದ್ರತೃಪ್ತಿಗಾಗಿ ಯಾಗಮಾಡುವ, ಸ್ತುತಿಸುವ, ಭಯ ಭಕ್ತಿಯಿಂದ ಸಮೀಪಿಸುವ ಸೋಮ ಅರ್ಪಿಸುವ – ಇವುಗಳಲ್ಲಿ ಒಂದಾದರೂರೀತಿ, ತೃಪ್ತಿತರುವವರು – ಇಂದ್ರನ ಪ್ರೀತಿಗೆ ಪಾತ್ರರಾಗುತ್ತಾರೆ.

ಸೋಮ ಹಿಂಡುವ, ಹವಿಸ್ಸನ್ನು ಪಾಕಮಾಡುವ, ವಿನಯದಿಂದ ಸಮೀಪಿಸುವವರಿಗೆ ಅಸಾಧಾರಣ ವೈಭವ, ಅನ್ನ, ಸಂಪತ್ತುಗಳನ್ನು ಇಂದ್ರನು ಕೊಡುತ್ತಾನೆ.

ಸೋಮ ನೀಡದ, ಯಜ್ಞ ಆಚರಿಸದವರಿಗೆ ಇಂದ್ರನು ಸುಹೃತ್ತಾಗದೇ, ಬಂಧುವಾಗದೇ ಹಿಂಸಿಸುತ್ತಾನೆ. ಧನಲೋಭಿ, ಯಜ್ಞಕ್ಕೆ ಸೋಮ ತರದವರು – ಇಂತಹವರೊಡನೆ ಇಂದ್ರನು ಸಖ್ಯ ಬೆಳೆಸುವುದಿಲ್ಲ. ಅವರ ಧನ ನಿರರ್ಥಕ, ಅವರ ಧನವನ್ನು ಇಂದ್ರನು ಅಪಹರಿಸುತ್ತಾನೆ, ನಾಶಮಾಡುತ್ತಾನೆ.

ಸೋಮರಸ ಹಿಂಡುವ, ಅಗ್ನಿಪ್ರಜ್ವಲಿತವಾಗುವ ಯಜ್ಞವು, ಮಾನವ ಹಿತಕಾರಿ, ಇಂದ್ರನ ಸಖಿತ್ವ ಅಪೇಕ್ಷಿಸುವುದು.

ಇಂದ್ರನನ್ನು ಸ್ತುತಿಕಾಮರಾಗಿ ಪೂಜಿಸಿ, ಇಂದ್ರಸಹಾಯ ಅಪೇಕ್ಷಿಸಿ, ಪ್ರಾರ್ಥಿಸುವ ಯಜಮಾನರಾರು? ಇಂದ್ರನಿಂದ ಪೂಜಿಸುವ, ಗೋ ಅಪೇಕ್ಷಿಸುವ, ಅಪರಿಮಿತ ರಕ್ಷಣೆಯಲ್ಲಿರುವ, ಯಾವ ಯಜಮಾನನಿದ್ದಾನೆ? ಇಂದ್ರನ ತೃಪ್ತಿಕಾರಕ, ಸುಹೃದ್ಭಾವದ, ಯಜಮಾನರಾರು?

ಇಂದ್ರ, ಅಗ್ನಿ, ಅಶ್ವಿನೀದೇವತೆಗಳು ತೃಪ್ತರಾಗಿ ಸ್ವೀಕರಿಸಿದ, ಸೋಮ ಅರ್ಪಿಸಿದ, ಯಜಮಾನರಾರು? –ಎಂಬುದನ್ನೆಲ್ಲಾ ತಿಳಿಯಲು ಯಜಮಾನ ಅಪೇಕ್ಷಿಸುತ್ತಾನೆ.

**ಸೂಕ್ತ - 26 (ಅಹಂ ಮನುರಭವಂ.......**

ಋಷಿ ವಾಮದೇವ ಇಂದ್ರೋವಾ ದೇವತಾ – ಇಂದ್ರ ಆತ್ಮಾಪಶ್ಯೇನ: ಛಂದ: – ತ್ರಿಷ್ಟುಪ್.

ವಾಮದೇವನು ತಾನು ಯಾರೆಂದು ಪರಿಚಯಿಸುತ್ತಾನೆ.

ಸಕಲವನ್ನೂ ತಿಳಿದಪ್ರಜಾಪತಿ, ಜಗತ್‌ಪ್ರೇರಕ ಸೂರ್ಯ, ಮೇಧಾವಿ ಕಕ್ಷೀವಾನ ಋಷಿ, ಅರ್ಜುನಿಯಪುತ್ರ ಕುತ್ಸನ್ನು ಅನುಗ್ರಹಿಸಿದವ, ಕ್ರಾಂತಿದರ್ಶಿ ಉಷನಸಿ ಋಷಿ, ಪ್ರಾಜ್ಯಮನುವಿಗೆ ಪೃಥ್ವಿಕೊಟ್ಟವ, ಹವಿರರ್ಪಿಸುವ ಯಜಮಾನರಿಗೆ ವೃಷ್ಟಿತರುವವ, ಉದಕಗಳನ್ನು ಸಕಲ ಪ್ರದೇಶದಲ್ಲೂ ಹರಡುವವ, ಸರ್ವವ್ಯಾಪಿ, ಸರ್ವಾತ್ಮಕವಾಗಿರುವವ, –'ವಾಮದೇವ'ನೆಂದು ಮಾನವರು ತಿಳಿಯಲಿ.

ಅಗ್ನ್ಯಾದಿ ಸಕಲ ದೇವತೆಗಳೂ ವಾಮದೇವನ ಸಂಕಲ್ಪ ಪಾಲಿಸುತ್ತಾರೆ.

ಶಂಭರಾಸುರನ ತೊಂಭತ್ತೊಂಭತ್ತು ಪಟ್ಟಣ ನಾಶಮಾಡಿ, ನೂರನೆಯ ಪಟ್ಟಣವನ್ನು ಅತಿಥಿಸತ್ಕಾರಮಾಡುವ, ರಾಜರ್ಷಿ ದಿವೋದಾಸನಿಗೆ, ಯೋಗ್ಯವಾಗುವಂತೆ ಮಾಡಿದವ, ಸೋಮಹರ್ಷಿತನಾದ ಇಂದ್ರಾತ್ಮಕವಾಮದೇವನೇ.

ಶ್ಯೇನಪಕ್ಷಿಯು, ದೇವಪಾನ ಸೋಮರಸವನ್ನು, ಮನುರೂಪ ಪ್ರಜಾಪತಿಗೆ, ಶೀಘ್ರಗಾಮಿಯಾಗಿ ಸ್ವಶಕ್ತಿಯಿಂದ ತಂದು ಶ್ರೇಷ್ಠವಾಯಿತು. ದ್ಯುಲೋಕದಲ್ಲಿ ಸೋಮ ಪಾಲಕರನ್ನು ಬೆದರಿಸಿ, ಮಧುರ ಸೋಮ ಅಪಹರಿಸಿ, ಚಕ್ರರಹಿತ ರಥದಲ್ಲಿ, ಅಂತರಿಕ್ಷಮಾರ್ಗದಲ್ಲಿ, ಮನೋವೇಗದಲ್ಲಿ ಹಾರಿ, ಸೋಮತಂದು, ಅತಿಶಯ ಕೀರ್ತಿಪಡೆಯಿತು.

ಅನೇಕ ಕರ್ಮಕರ್ತ, ಪ್ರಾಜ್ಞ, ಸ್ಥಿರಚಿತ್ತದ, ಇಂದ್ರನು ಸೋಮ ಸ್ವೀಕರಿಸಿದ ಆನಂದದಲ್ಲಿ ಚಂಚಲ ಚಿತ್ತರಾದ ಶತ್ರುಗಳನ್ನು ನಾಶಮಾಡಿದನು.

**ಸೂಕ್ತ - 27 (ಗರ್ಭೇ ನು ಸನ್ನನ್ವೇಷಾಮ.....**

ಋಷಿ ವಾಮದೇವರು ಶ್ಯೇನ ಇಂದ್ರದೇವತೆಗಳನ್ನೂ ತ್ರಿಷ್ಟುಪ್ ಶಕ್ವರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಗರ್ಭಸ್ಥನಾಗಿದ್ದಾಗ ವಾಮದೇವನನ್ನು, ಅಯೋ ರೂಪ ಶರೀರಗಳು ಪ್ರತಿಬಂಧಿಸಿದರೂ, ವಾಮದೇವನು, ಅಜ್ಞಾನ ಮೋಹಗಳಿಗೆ ವಶನಾಗಲಿಲ್ಲ. ಗರ್ಭಸ್ಥದುಃಖವನ್ನೂ , ತೀಕ್ಷ್ಣಜ್ಞಾನರೂಪ ಸಾಮರ್ಥ್ಯದಿಂದ ಜಯಿಸಿದನು, ಕ್ಲೇಷದಾಯಕ ಗರ್ಭಸ್ಥ ವಾಯುಗಳನ್ನೂ ದಾಟಿದನು. ಜಗತ್ಪ್ರೇರಕ ಪರಿಪೂರ್ಣ ಪರಮಾತ್ಮನು, ಗರ್ಭಸ್ಥ ಶತ್ರುಗಳನ್ನು ನಾಶಮಾಡಿದನು. ಆತ್ಮಸಾಕ್ಷಾತ್ಕಾರಕ್ಕೆ ಅಡ್ಡಿಯಾಗಿದ್ದ, ಶರೀರದೊಳಗೆ ಹಿಡಿದಿಡಲ್ಪಟ್ಟಿದ್ದ ವಾಮದೇವನು, ಶ್ಯೇನರೂಪ ಧರಿಸಿ ಬಹುವೇಗದಿಂದ, ತಾಯಿಯ ಶರೀರ ಭೇದಿಸಿಕೊಂಡು, ಹೊರಬಂದನು.

ವಾಮದೇವನು ಗರ್ಭಸ್ಥನಾಗಿರುವಾಗಲೇ, ಇಂದ್ರಾದಿ ದೇವತೆಗಳು ಉತ್ಪತ್ತಿ ಸ್ವರೂಪವನ್ನು ಅರಿತನು. ದ್ಯುಲೋಕದಿಂದ ಸೋಮಹರಣವಾದದ್ದನ್ನು ತಿಳಿದು, ಶ್ಯೇನ ಪಕ್ಷಿಯು ಶಬ್ದದಿಂದಲೇ 'ಕೃಶಾನು' ಎಂಬ ಸೋಮಪಾಲಕನು, ಮನೋವೇಗದಿಂದ ಶ್ಯೇನವನ್ನು ಹಿಂಬಾಲಿಸಿ ಬಾಣ ಪ್ರಯೋಗಿಸಿದನು. ಪ್ರಾಪ್ತವಾದ ಹೋರಾಟದಲ್ಲಿ ಶ್ಯೇನಪಕ್ಷಿಯ, ಮಧ್ಯಭಾಗದ ಗರಿಯೊಂದು, ಕೆಳಗೆಬಿದ್ದು ಹೋಯಿತು. ಅಶ್ವಿನೀಗಳು ಭುಜ್ಯನನ್ನು ಹೊತ್ತುತಂದಂತೆ, ಶ್ಯೇನವು, ಸೋಮನನ್ನು ಹೊತ್ತು ತಂದಿತು.

ಸೋಮರಸವು, ಶುಭ್ರಕಳಶ ಪಾತ್ರೆಯಲ್ಲಿರುವ, ಪಯಸ್ಸಿಂದ ಕೂಡಿದ, ತೃಪ್ತಿದಾಯಕ ಸಾರಭೂತ ಅಧ್ವರ್ಯು, ಅರ್ಪಿತವಾದುದಾಗಿದೆ. ಪರಾಕ್ರಮಿ ಧನವಂತ ಇಂದ್ರನು ಮಧುರವಾದ ಸೋಮರಸದ ಅಗ್ರಭಾಗವನ್ನು, ಹರ್ಷಾರ್ಥ ಪಾನಮಾಡಲಿ.

### ಸೂಕ್ತ - 28 (ತ್ವಾ ಯುಜಾ ತವ ತತ್ ಸೋಮ.....

ಋಷಿ ವಾಮದೇವರು ಇಂದ್ರ ಮತ್ತು ಸೋಮ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಸೋಮ ಮತ್ತು ಇಂದ್ರರು ಸ್ನೇಹಿತರು ಇವರುಗಳ ಸ್ನೇಹದಿಂದಾಗಿ, ಇಂದ್ರನು ಮಾನವಹಿತಕಾರಿ, ಪ್ರವಾಹ ಉಂಟುಮಾಡಿದನು. ವೃತ್ರ ಹತ್ಯೆಮಾಡಿ ಸಪ್ತಮಹಾನದಿಗಳಿಗೆ ಪ್ರವಾಹತಂದನು. ಸರ್ವತ್ರಸಂಚಾರಿ, ಸೂರ್ಯಚಕ್ರವನ್ನು ಬಲಾತ್ಕಾರವಾಗಿ ಕಿತ್ತುಕೊಂಡನು. ಶತ್ರುಗಳನ್ನೂ, ಸಂಚಾರಿ ಅಸುರರನ್ನೂ ನಿಶ್ಶೇಷಮಾಡಿದನು. ದಸ್ಯುಗಳನ್ನು ಸದ್ಗುಣ ಭ್ರಷ್ಟರನ್ನಾಗಿ, ಕರ್ಮಹೀನ ಮಾನವರನ್ನು, ನಿಂದಾಯೋಗ್ಯರನ್ನಾಗಿಮಾಡಿ, ಪಣಿಗಳಿಂದ ಗೋವುಗಳು ಹಾಗೂ ಭೂಮಿಯನ್ನು ವಶಪಡಿಸಿ ಕೊಂಡನು.

ಅಗ್ನಿಯು ಶತ್ರುನಾಶ ಮಾಡಿದನು.

ಅಗ್ನಿ, ಇಂದ್ರ, ಸೋಮರು ಶತ್ರುಗಳನ್ನು ಪೂರ್ಣನಾಶ ಮಾಡಲಿ. ಇದರಿಂದ ಉಪಕೃತಜನಗಳ ಕೃತಜ್ಞತಾಪೂರ್ವಕ ಪೂಜೆ ಸ್ವೀಕರಿಸಲಿ.

### ಸೂಕ್ತ - 29 (ಆ ನಃ ಸ್ತುತ ಉಪ ವಾಜೇಭಿರೂತೀ .....

ಋಷಿ ವಾಮದೇವರು ಇಂದ್ರನನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ರಕ್ಷಿತ ಮೇಧಾವಿ ಸ್ತೋತೃಗಳು ಇಂದ್ರನನ್ನು ಸ್ತುತಿಸುತ್ತಾರೆ. ಸ್ತುತಿತ ಪ್ರಾರ್ಥಿತ ಇಂದ್ರನು, ಸೋಮವಂತ ಯಜಮಾನಾಭಿಮುಖ ಅನ್ನದೊಡನೆ ಯಜ್ಞಾಭಿಮುಖ, ಹರ್ಷದಿಂದ ಅಶ್ವದೊಡನೆ ಬರುತ್ತಾನೆ.

ಇಂದ್ರನ ಕಿವಿಯಲ್ಲಿ ಶ್ರುತಿ ಶ್ರವಣ ಮಾಡಿಸಲು, ಯಜಮಾನ ಸ್ತೋತ್ರುಗಳು, ಸಕಲದಿಕ್ಕುಗಳಿಂದಲೂ ಹರ್ಷಸ್ತುತಿ ಸ್ತುತಿಸುತ್ತಾರೆ.

ಸೋಮದಿಂದ ತೋಯಿಸಲ್ಪಟ್ಟ, ಶಕ್ತ ಇಂದ್ರನು, ಯಜಮಾನನು ಸಂಪದಪ್ರದ ಭಯರಹಿತ ಪ್ರಭೂತಧನಿ, ಅನ್ನವಂತನಾಗಲು – ಸ್ತುತಿಸುತ್ತಾ ಇರುವಂತೆಮಾಡಲಿ.

## ಸೂಕ್ತ - 30 (ನಕಿರಿಂದ್ರ ತ್ವದುತ್ತರೋ ನ.....

ಋಷಿ ವಾಮದೇವರು ಇಂದ್ರ ಹಾಗೂ ಉಷಸ್ ದೇವತೆಗಳನ್ನು ಗಾಯತ್ರೀ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನಿಗಿಂತ ಶ್ರೇಷ್ಠರು ಯಾರೂ ಇಲ್ಲ. ಇಂದ್ರನು ಪುರುಷ ಸಾಮರ್ಥ್ಯ ಪ್ರಕಟಿಸಿದಾಗ, ಅದನ್ನು ಪ್ರತಿಭಟಿಸುವವರು, ಈ ಕಾಲದಲ್ಲಿ ಯಾರು ಇಲ್ಲ. ಇಂದ್ರನ ಸಹಾಯದಿಂದಲೇ ದೇವತೆಗಳು ಯುದ್ಧಮಾಡಿದರು. ಸಕಲ ಪ್ರಜೆಗಳೂ ಇಂದ್ರನನ್ನೇ ಆಶ್ರಯಿಸಿದ್ದಾರೆ. ಯಜಮಾನರಲ್ಲಿ ಇಂದ್ರನು ಸಮಾನ ಪ್ರೀತಿ ಉಳ್ಳವನಾಗಿದ್ದಾನೆ.

'ಸಿಂಧೂ' ನದಿಯನ್ನು ಅಸುರರು ತಡೆಹಿಡಿದಿದ್ದರು. ತನ್ನ ಪ್ರಜ್ಞಾಬಲದಿಂದ ಇಂದ್ರನು ನದಿಯನ್ನು ಭೂಮಿಯ ಮೇಲೆ ಸುತ್ತಲೂ ಹರಡಿ ಪ್ರವಹಿಸುವಂತೆ ಮಾಡಿದನು.

ಇಂದ್ರನು ದೇವಮಾನವರ ಸಹಾಯವಿಲ್ಲದೆ, ಕುತ್ಸನ ಸಹಾಯಾರ್ಥ ಸೂರ್ಯಸಂಬಂಧಿ ಚಕ್ರ ಅಪಹರಿಸಿದ. 'ಅಗ್ರೊ' ಎಂಬುವಳ ಪುತ್ರಿ – ಪರಾವೃಜ – ಇಂದ್ರಸ್ತೋತ್ರದಲ್ಲಿ ಭಾಗವಹಿಸುವಂತೆ ಮಾಡಿದ. ಮಾನವನಾದ 'ಎಕಶ' ಋಷಿ ರಕ್ಷಣೆಗಾಗಿ ಸೂರ್ಯನನ್ನೇ ಹಿಂಸಿಸಿದ. 'ಯಯಾತಿ'ಯ ಶಾಪದಿಂದಾಗಿ ಅಭಿಷೇಕಕ್ಕೆ ಅನರ್ಹರಾಗಿದ್ದರೂ, 'ತುರ್ವಶ ಮತ್ತು ಯದು' ರಾಜರನ್ನು ಅಭಿಷೇಕ ಯೋಗ್ಯ ಮಾಡಿದ. 'ದಭೀತಿ' ಎಂಬ ಆರ್ಯನಿಗೆ ಸಹಾಯಮಾಡಲು, ಮೂವತ್ತು ಸಹಸ್ರರಾಕ್ಷಸರನ್ನು, ಹರಿತ ಆಯುಧಗಳಿಂದ ತನ್ನ ಪ್ರಜ್ಞಾರೂಪಶಕ್ತಿಯಿಂದ ನಾಶಮಾಡಿದ, ಯಜ್ಞಕರ್ತ 'ದಿವೋದಾಸ'ನಿಗಾಗಿ ಸಹಾಯಾರ್ಥ, ಬಂಡೆಗಳಿಂದ ನಿರ್ಮಿತ, ಶಂಭುರಾಸುರ ಪಟ್ಟಣ ಉರುಳಿಸಿದ.

ಕುರುಡ, ಕುಂಟರುಗಳಿಗೆ, ಕಣ್ಣು ಕಾಲುಗಳನ್ನು ಒದಗಿಸಿದ. ಇಂದ್ರದತ್ತ ಆ ಸುಖವನ್ನು ಅತಿಕ್ರಮಿಸಲು, ಯಾರಿಗೂ ಸಾಧ್ಯವಿಲ್ಲ.

ಇಂದ್ರನು ಕ್ರೋಧಯುಕ್ತನಾಗಿ ಹಿಂಸಕಶತ್ರು ಅಸುರರುಗಳನ್ನು ನಾಶಪಡಿಸಿ, ಧನುಪುತ್ರ ವೃತ್ರನನ್ನು ಹಿಂಸಿಸಿಕೊಂದನು. ಶುಷ್ಣಾಸುರನ ಪಟ್ಟಣ ನಾಶಮಾಡಿ, ಅವನ ಧನ ಅಪಹರಿಸಿ 'ಕುಲಕರ'ನ ಹಿಂಸಕಪುತ್ರ ಶಂಭುರಾಸುರನನ್ನು ಪರ್ವತದ ಮೇಲಿಂದ ತಲೆಕೆಳಗಾಗಿ ಎಸೆದ, ಅಸುರ 'ವರ್ಚಿ' ಮತ್ತು ಅವನನ್ನು ಸುತ್ತುವರೆದಿದ್ದ, ಸಾವಿರಾರು ಅಸುರರನ್ನು ಕೊಂದ. ಪುರುಷ ಲಕ್ಷಣ ಸಾಮರ್ಥ್ಯದ, ಹಿಂಸಕ ಅಂತರಿಕ್ಷ ಪುತ್ರಿಯನ್ನು ಕೊಂದ.

ಆರ್ಯರಾಗಿದ್ದೂ ಇಂದ್ರನನ್ನು ಆರಾಧಿಸದೇ ಇದ್ದ, ಸರಯು ನದೀತೀರ ವಾಸಿಗಳಾಗಿದ್ದ ರಾಜ 'ಅರ್ಣ' ಮತ್ತು ಚಿತ್ರರಥರನ್ನು, ನಾಶಮಾಡಿದ. ದ್ಯುಲ್ಲೋಕ ಪುತ್ರಿ 'ಉಷೆ'ಯನ್ನು ಪೂರ್ಣ ಹಿಂಸಿಸಿ, ಅವಳ ರಥನಾಶಮಾಡಿದಾಗ, ಆ ರಥ 'ವಿರಾಟ' ನದಿಯ ಮೇಲೆ ಬಿದ್ದಿತು. ಉಷೆಯು ಹೆದರಿ ದೂರ ದೇಶಕ್ಕೆ ಓಡಿದಳು.

ಪೂಜ್ಯ ಆರ್ಯಮ ವೃತ್ತದಂತ, ಪೂಷ, ಭಗ, ಇಂದ್ರರು – ಶತ್ರುಧನವನ್ನು ಋತ್ವಿಜರು ಯಜಮಾನರುಗಳಿಗೆ ಹಂಚಿಕೊಡಲಿ.

**ಸೂಕ್ತ - 31 (ಕಯಾ ನಶ್ಚಿತ್ರ ಆ ಭುವದೂತೀ.....**

ಋಷಿ ವಾಮದೇವರು ಇಂದ್ರದೇವನನ್ನು ಗಾಯತ್ರೀ ಮತ್ತು ಪಾದನಿಚೃತ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರನ ಉದ್ದೇಶವೆಲ್ಲಾ ರಕ್ಷಕವಾಗಿಯೇ ಇರುತ್ತದೆ. ಉನ್ನತದ್ಯುಲ್ಲೋಕದಂತೆ, ಯಜಮಾನನ ಕೀರ್ತಿ, ದೇವತೆಗಳಲ್ಲಿ ಹರಡಿ, ಉತ್ಕೃಷ್ಟವಾಗುವಂತೆ ಮಾಡುತ್ತಾನೆ.

ಸೋಮವು ಸತ್ಯಾತ್ಮಕ ಮದಕಾರಕ, ದೃಢವಾದದು ಶತ್ರುಧನನಾಶಕ್ಕಾಗಿ, ಯಜಮಾನನನ್ನು ಹುರಿದುಂಬಿಸುತ್ತದೆ. ಕರ್ಮಕರ್ತ ಯಜಮಾನನಿಗೆ ಸೇರಿದ ಯಜ್ಞಪ್ರದೇಶಗಳು, ಇಂದ್ರನವೇ. ಯಜಮಾನನು ಮೊದಲು ಇಂದ್ರನನ್ನು ಪೂಜಿಸಿ, ನಂತರ ಸೂರ್ಯನನ್ನು ಪೂಜಿಸುತ್ತಾನೆ.

ಇಂದ್ರನ ರಥವು ಶತ್ರುನಾಶಕ, ಕಾಂತಿಯುತ, ನಾಶರಹಿತವಾದದ್ದು. ಇಂದ್ರನ ಶಕ್ತಿಯು ರಾಕ್ಷಸರಿಗೆ ತಡೆಯಲಾಗದ ಹಿಂಸಾಕಾರಕಗಳು, ಹಿಂಸಕರಾಕ್ಷಸರು ಇಂದ್ರನ ಅನೇಕ ಧನವನ್ನು ನಾಶಮಾಡಲಾರರು.

ಯಜಮಾನರು, ಇಂದ್ರಸಖ್ಯ ಧನಲಾಭಗಳಿಗಾಗಿ, ಇಂದ್ರನನ್ನು ಸತ್ಕರಿಸುತ್ತಾರೆ. ಮಾನವ ಸ್ತುತಿಗಳಿಂದ ಹರ್ಷಿತನಾಗಿ, ಇಂದ್ರನು ಸೋಮವಂತ ಯಜಮಾನನಿಗೆ, ಅನೇಕರೂಪಿ ಧನವನ್ನು, ಅನೇಕ ಪ್ರಕಾರಗಳಲ್ಲಿ ಕೊಡುತ್ತಾನೆ. ಪ್ರಭೂತಧನ, ಅಸಂಖ್ಯಾತ ನೂತನ ರಕ್ಷಣೆಗಳಿಂದ, ಸಕಲ ದಿನಗಳಲ್ಲೂ, ಮಿತ್ರರಕ್ಷಣೆಗೆ ಇಂದ್ರನು ಅಭಿಮುಖನಾಗಲಿ.

ಯಜಮಾನನಿಗೆ ಗೋವ್ರಜ ಒದಗಿಸಲಿ, ಸೂರ್ಯನೂ ಅತಿಶಯ ವೃಷ್ಟಿ ಸುರಿಸಲಿ.

ಯಾವ, ತೃಪ್ತಿ ಪ್ರಜ್ಞಾಪೂರ್ವಕ ಕರ್ಮಗಳಿಂದ ಇಂದ್ರನು ಯಜಮಾನಾಭಿಮುಖ ವಾಗಿ ಬರುತ್ತಾನೆ?

**ಸೂಕ್ತ - 32 (ಆ ತೂ ನ ಇಂದ್ರ ವೃತ್ರಹನ್ನಸ್ಮಾಕ.....**

ಋಷಿವಾಮದೇವರು ಇಂದ್ರದೇವನನ್ನು ಇಂದ್ರಾಶ್ವವನ್ನೂ ಗಾಯತ್ರೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಇಂದ್ರನು ಸಕಲಯಜಮಾನರಿಗೂ ಬೇಕಾದವನಾದರೂ, ತಮಗೆ ಮಾತ್ರಾ ಪ್ರಭೂತ ರಕ್ಷಣೆಯೊಡನೆ ಅಭಿಮುಖವಾಗಿ ಸಹಾಯ ಮಾಡಲು ಋಷಿಯು ಪ್ರಾರ್ಥಿಸುತ್ತಾನೆ. ಒಬ್ಬನೇ ಪ್ರಭುವಾದ ಇಂದ್ರನು, ಹಿಂಸೆಕೊಡದೆ ಗೋಸಹಿತ ಅನ್ನ ಹಾಗೂ ಯಜ್ಞಸಾಧನ ಕಲ್ಪಿಸಿಕೊಡಲು ಸಮರ್ಥ, ನಾನಾ ಕರ್ಮನಿರತ ಯಜಮಾನನಿಗೆ, ಆಕರ್ಷಕ ಧನ ಕೊಡಲು ಇಚ್ಛಿಸಿದಾಗ, ಇಂದ್ರನನ್ನು ಯಾರುತಡೆಯುವುದಿಲ್ಲ.

ಪ್ರಾಜ್ಞರು ಸೋಮ ಹಿಂಡಿ ಅರ್ಪಿಸುವ ಕಾಲದಲ್ಲಿ ಇಂದ್ರನ ವೀರ ಕರ್ಮಗಳನ್ನು ಸ್ತುತಿಸುತ್ತಾರೆ. ರಸ ಸೂಪ ಅನ್ನಾದಿ ಅರ್ಪಿಸಿ ಹರ್ಷಗೊಳಿಸುತ್ತಾರೆ.

ಅಹಿಂಸಾತ್ಮಕ ಹೊಂಬಣ್ಣದ ಪರಿಣಾಮಕ ಅಶ್ವಗಳು ಇಂದ್ರನನ್ನು ಯಜಮಾನನಲ್ಲೇ ಇರಿಸಲು ಇಚ್ಛಿಸುತ್ತವೆ. ಅಶ್ವಗಳು, ನೂತನ ಕೌಶಲ್ಯದ ಚಿಕ್ಕ ಬೊಂಬೆಗಳಂತೆ, ಯಜ್ಞಸ್ಥಾನದಲ್ಲಿ ಪ್ರಕಾಶಿಸುತ್ತವೆ. ಯಜಮಾನನು, ಕಾಲುನಡಗೆಯಲ್ಲಿ ಹೋಗಲಿ, ಎತ್ತಿನ ಬಂಡಿಯಲ್ಲಿ ಹೋಗಲಿ –ಯುದ್ಧಕಾಲದಲ್ಲಿ ಆ ಅಶ್ವಗಳಿಂದ ಯಜಮಾನನಿಗೆ ತೃಪ್ತಿಯೇ.

ಯಜಮಾನರು, ಇಂದ್ರಸದೃಶ ದೇವತೆಗಳಿಗೆ ಸ್ನೇಹಿತರಾಗಿ ಒಳ್ಳೆಯಸ್ಥಿತಿಯಲ್ಲಿ ಇರುವಂತಾಗಲಿ. ಇಂದ್ರನೊಂದಿಗೆ ಸೇರಿರುವ ಯಜಮಾನರು ಪೂರ್ಣ ರಕ್ಷಣೆ ಪಡೆಯಲಿ –ಎಂದು ಗೋತಮ ಋಷಿಗಳು ಅನೇಕ ಸ್ತುತಿ ನಿರ್ಮಿಸಿ ಪೂರ್ಣವಾಗಿ ಸ್ತುತಿಸುತ್ತಾರೆ. ಅನ್ನ ಧನ, ವೀರ್ಯವಂತ ಪುತ್ರರು, ಪೌತ್ರರು – ಇವರಿಗಾಗಿ ಪ್ರಾರ್ಥಿಸುತ್ತಾರೆ. 'ಅಲ್ಪಧನ ಕೊಡುವುದು ಬೇಡ' ಎಂದು ಅಪೇಕ್ಷಿಸುತ್ತಾರೆ.

ಸುವರ್ಣರೂಪ ದಶಸಂಖ್ಯಾತ ಅಧಿಕಧನ, ಸಹಸ್ರಾರು ಗೋಧನ, ಸಹಸ್ರಾರು ಅಶ್ವಗಳು, ಸೋಮ ತುಂಬಿದ ನೂರು ದ್ರೋಣಕಳಶಗಳು – ಇವೆಲ್ಲಾ ಯಜಮಾನನಿಗೆ ಬಂದು ಸೇರಲಿ. ಇಂದ್ರಧನಕ್ಕೆ ಯಜಮಾನನು ಪಾತ್ರನಾಗಲಿ ಮತ್ತು ಅದನ್ನು ಸೇವಿಸುವಂತಾಗಲಿ. ಇಂದ್ರನ ಅಶ್ವಗಳು ಸ್ತುತಿವಾಕ್ಯ ಪುರೋಡಾಶಗಳನ್ನು ಪಡೆಯುವಂತಾಗಲಿ ಮತ್ತು ಯಜಮಾನನ ಗೋವುಗಳನ್ನು ಹೆದರಿಸದಿರಲಿ.

## (ಅಷ್ಟಕ -3 ಅಧ್ಯಾಯ 7)

**ಸೂಕ್ತ - 33 (ಪ್ರ ಋಭುಭ್ಯೋ ದೂತಮಿವ.....**

ಋಷಿ ವಾಮದೇವರು ಋಭವ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕುಶಲ ಕಾರ್ಯಹಸ್ತರಾದ ಋಭುಗಳು ನಿರ್ಮಿಸಿದ ರಥವು ಸ್ಥಿರ ಚಕ್ರದ ಮೇಲೆ ಸ್ಥಾಪಿತ. ವಿಶ್ವ ಪ್ರೇರಕಧೇನು ನಿರ್ಮಾತೃಗಳೂ, ಇಂದ್ರರಥಕ್ಕೆ ಯೋಗ್ಯ 'ಹರಿ' ಅಶ್ವಗಳನ್ನು ನಿರ್ಮಿಸಿ ಇಂದ್ರನನ್ನು ಹರ್ಷಗೊಳಿಸಿದ ಋಭುಗಳು, ಅಸಾಧಾರಣ ಕರ್ಮಗಳಿಂದ ದೇವತ್ವ ಪಡೆದರು.

ಶಿಥಿಲ ಶರೀರಿಗಳಾಗಿದ್ದ ತಮ್ಮ ಮಾತಾಪಿತೃಗಳನ್ನು, ಯುವಕರನ್ನಾಗಿಸಿದ, ಇವರು ಕಾರ್ಯವನ್ನು ಇಂದ್ರಾದಿಗಳೂ ಮೆಚ್ಚುತ್ತಾರೆ. ಒಂದು ವರ್ಷಕಾಲ, ಮೃತ ಗೋವಿಗೆ ಜೀವಕೊಟ್ಟು, ಮಾಂಸ ಪುಷ್ಟಿಮಾಡಿದ್ದು, ಕಾಂತಿ ಸೌಂದರ್ಯದಿಂದ ರಕ್ಷಿಸಿದವರು – ಋಭುಗಳೇ.

ಒಂದಾಗಿದ್ದ ಚಮಸ ಪಾತ್ರೆಯನ್ನು ಎರಡಾಗಿ, ಮೂರಾಗಿ, ನಾಲ್ಕಾಗಿ ಮಾಡುವ ವಾಜ, ವಿಭ, ಋಭು, ಸಹೋದರರ ಕುಶಲತೆಯನ್ನು, ತ್ವಷ್ಟನು ನೋಡಿ ತೃಪ್ತನಾಗಿ ಪ್ರಶಂಸಿಸಿದನು.

ತೃತೀಯಸವನ ಕಾಲದಲ್ಲಿ, ದೇವತೆಗಳು ಋಭುಗಳಿಗೆ ಸೋಮ ಪಾನ ಹರ್ಷಮಾಡಿಸಿದುದು – ದಾಸ ಅಥವಾ ಮೈತ್ರಿ – ಇದರ ಕುರುಹಲ್ಲ! ಋಭುಗಳ ತಪಸ್ಸಿನ ಫಲ!

ಋಭುಗಳು, ಆದಿತ್ಯನಲ್ಲಿ ಹನ್ನೆರಡುದಿನ ಸಂತೋಷವಾಗಿದ್ದು, ಬಂಜರು ಭೂಮಿಯನ್ನು ಫಲವತ್ತಾಗಿಯೂ, ಬೆಂಗಾಡಿನಲ್ಲಿ ಓಷಧಿ ಬೆಳೆಯುವಂತೆಯೂ, ನದಿಗಳು ಪ್ರವಹಿಸುವಂತೆಯೂ, ಮತ್ತು ತಗ್ಗು ಪ್ರದೇಶದಲ್ಲಿ ಹರಿವಂತೆಯೂ, ಮಾಡಿದರು.

ಅಸಾಧಾರಣ ಕರ್ಮಗಳು, ವ್ಯಾಪಕಶಕ್ತಿ ಯೌವನ ಹಾಗೂ ಮಾತಾಪಿತೃಗಳ ಉಪಕಾರದಿಂದ, ಋಭುಗಳು ಇಂದ್ರಸಖಿತ್ವ ಪಡೆದರು. ಜ್ಯೇಷ್ಠ ಋಭುವು ಇಂದ್ರನ ಕುಶಲಕರ್ಮಿ ಆದನು; ಮಧ್ಯಮ ವಿಭುವು ವರುಣನಿಗೆ ಬೇಕಾದವನಾದನು, ಮೂರನೆಯವನಾದ ವಾಜನು ದೇವತೆಗಳಿಗೆ ಬೇಕಾದ ಉತ್ತಮ ಕಾರ್ಯಕರ್ತನಾದನು.

ಯಜಮಾನರು ಋಭುಗಳಿಗೆ ವಾಕ್‌ಸ್ತುತಿಗಳನ್ನು ಅರ್ಪಿಸುತ್ತಾರೆ. ಋಭುಗಳು ಇಂದ್ರನೊಡನೆ ಸೋಮಪಾನ ಮಾಡಿ, ಯಜ್ಞರಕ್ಷಿಸಲಿ. ತೃತೀಯ ಸವನ ಕಾಲದಲ್ಲಿ ಧನ ಒದಗಿಸಲಿ, ಯಜಮಾನರ ಕಲ್ಯಾಣ ಇಚ್ಛಿಸಿ, ಸೋಮ ಮಿಶ್ರಿತ ಪಯಸ್ಸಿಗೆ ಅಗತ್ಯವಾದ ಗವಾದಿ ಸಂಪತ್ತು ಧನಸಂಪತ್ತು ಮತ್ತು ವೃಷ್ಟಿಯನ್ನು ಯಜಮಾನನಿಗೆ ಒದಗಿಸಲಿ.

**ಸೂಕ್ತ - 34 (ಋಭುರ್ವಿಭ್ವಾ ವಾಜ ಇಂದ್ರಾ ನೋ......**

ಋಷಿ ವಾಮದೇವರು ಋಭು ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಋಭುಗಳು ರಥನಿರ್ಮಾಣದಿಂದ ಅಶ್ವಿನೀ ದೇವತೆಗಳನ್ನು ತೃಪ್ತಿಗೊಳಿಸಿದರು. ವೃದ್ಧ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡಿದರು. ಮೃತ ಗೋವನ್ನು ಬದುಕಿಸಿದರು. ಇಂದ್ರನ ಅಶ್ವ ನಿರ್ಮಿಸಿದರು. ದೇವತೆಗಳಿಗೆ ಕವಚ ನಿರ್ಮಿಸಿದರು. ದ್ಯಾವಾಪೃಥಿವಿಗಳನ್ನು ಪ್ರತ್ಯೇಕ ಮಾಡಿದರು. ಸರ್ವವ್ಯಾಪ್ತರಾಗಿ ನೇತೃಗಳಾಗಿ ಶ್ರೇಷ್ಠಸಿದ್ಧಿಯ ಕರ್ಮ ಮಾಡಿದರು.

ಋಭು, ವಾಜ, ವಿಭರು – ಪ್ರಜಾಪತಿಯ ಅನುಗ್ರಹದಿಂದ, ಇಂದ್ರನೊಂದಿಗೆ ಸೋಮಸೇವಿಸಿ ಹರ್ಷಗೊಂಡರು. ಅಹಸ್ಸಿನ ಸಮಾಪ್ತಿಕಾಲ – ತೃತೀಯಸವನದಲ್ಲಿ ಋಭುಗಳಿಗಾಗಿ ಸಿದ್ಧವಿರುವ ಸೋಮರಸವು, ಇವರನ್ನು ಎದುರುಗೊಳ್ಳುತ್ತವೆ. ಋಭುಗಳು, ಗೋವು, ಅನ್ನ, ನಿವಾಸ ಯೋಗ್ಯ ಗೃಹ, ಧನ ಯುಕ್ತರಾಗಿದ್ದಾರೆ.

ಇಂತಹ ಋಭು ವಾಜ, ಮೊದಲು ಸೋಮಪಾನ ಮಾಡಲಿ. ಸೋಮರೂಪ ಅನ್ನದ ಹರ್ಷವು, ಯಜಮಾನನ ಸ್ತುತಿಯೊಂದಿಗೆ ಸೇರಿಕೊಳ್ಳಲಿ. ಇಂದ್ರ, ವರುಣ, ಮರುತ್ತುಗಳೂ ದೇವಪತ್ನಿಯರೊಡಗೂಡಿ, ಸಮಾನಪ್ರೀತಿಯಿಂದ, ಸೋಮಸೇವಿಸಲಿ. ಋಭುಗಳು, ಆದಿತ್ಯ, ಪರ್ವತ ದೇವತೆ, ಸವಿತೃ ಹಾಗೂ ನದ್ಯಾಭಿಮಾನ ದೇವತೆಗಳೊಂದಿಗೆ – ಹರ್ಷಕ್ಕಾಗಿ ಮಧುರ ಸೋಮ ಪಾನಮಾಡಿ – ಹರ್ಷ ಸಂತೃಪ್ತಿ ಪಡೆಯಲಿ.

ಋಭು ವಾಜ ವಿಭರು, ಇಂದ್ರ, ಮರುತ್ತು ಮತ್ತು ಇತರ ದೇವತೆಗಳೊಂದಿಗೆ, ಯಜಮಾನನ ಯಜ್ಞಕ್ಕೆ ಬರಲಿ. ಮಾನವ ಯಜಮಾನರನ್ನು ತ್ಯಜಿಸದಿರಲಿ; ಬಾಯಾರಿಕೆಯಿಂದ

ಯಜಮಾನರಿಗೆ ಯೋಗ್ಯ ಧನವನ್ನು ವೀರ ಪುತ್ರರನ್ನೂ, ಅನ್ನವನ್ನೂ, ಹರ್ಷಚಿತ್ತವನ್ನೂ ಅನುಗ್ರಹಿಸಲಿ.

**ಸೂಕ್ತ - 35 (ಇಹೋಪ ಯಾತ ಶವಸೋ ನಪಾತಃ.....**

ಋಷಿ ವಾಮದೇವರು ಋಭುದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಋಭುಗಳು ಉತ್ತಮ ಮಹತ್ ಕರ್ಮದಿಂದ ಇಂದ್ರನ ಸ್ನೇಹಿತರಾದರು. ಪ್ರಜಾಪತಿಯಿಂದ ಸೋಮಪಡೆದರು. ಅಗ್ನಿಯಿಂದ ಸೋಮಪಾನಕ್ಕೆ ಅನುಜ್ಞೆ ಪಡೆದರು. ಸೋಮಪಾನಮಾಡಿ ಶ್ಯೇನದಂತೆ, ವೇಗವಾಗಿ ದ್ಯುಲೋಕಸೇರಿದರು, ಇಂದ್ರಾದಿಗಳ ಸಮಾನರಾದರು.

ಋಭುಗಳ ನೈಪುಣ್ಯದಿಂದ, ಒಂದಾಗಿದ್ದ ಚಮಸಪಾತ್ರೆ ನಾಲ್ಕಾದವು. ವೃದ್ಧ ಮಾತಾಪಿತೃಗಳು ಯುವಕರಾದರು. ಧನುರ್ವೇಗಕ್ಕಿಂತ ವೇಗವಾದ ಅಶ್ವವು, ಇಂದ್ರನಿಗಾಗಿ ನಿರ್ಮಿತವಾಯಿತು.

ಪ್ರಾತಃಸವನ, ಮಾಧ್ಯಂದಿನ ಸವನದ ಸೋಮಗಳು ಇಂದ್ರನಿಗಾಗಿಯೇ ಇರಲಿ. ತ್ರಿತೀಯ ಸವನದಲ್ಲಿ ಹಿಂಡಿದ ಸೋಮವು ಇಂದ್ರನೊಂದಿಗೆ ಋಭುಗಳಿಗೆ ಪಾನವಾಗಲಿ. ಇದಕ್ಕಾಗಿ ಇಂದ್ರನನ್ನು ಅನುಸರಿಸಿ, ಯಜಮಾನನನ್ನು ದೂರಮಾಡದೆ ಸೋಮಪಾನಕ್ಕೆ ಬರಲಿ. ಇಂದ್ರಿಯ ಮೂಲಕ ಪೂರ್ಣಪಾನ ಮಾಡಿ, ಕರ್ಮೇಚ್ಛು ಉಳ್ಳವರಾಗಲಿ.

ಸೋಮ ಅರ್ಪಿಸುವ ಯಜಮಾನರಿಗೆ, ಬಹುಪುತ್ರೋಪೇತಧನ, ರಮಣೀಯಧನ ಸಂಪಾದಿಸಿಕೊಡಲಿ. ಒಂದು ನಾಲ್ಕಾದ ಚಮಸ ಪಾತ್ರೆಯ ಸತ್ತ್ವ ಎಂತಹುದು?

**ಸೂಕ್ತ - 36 (ಅನಶ್ವೋ ಜಾತೋ ಅನಭ್ಯೀಶುರುಕ್ಥ್ಯೋ.....**

ಋಷಿ ವಾಮದೇವರು ಋಭುದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಋಭುಗಳು ಧ್ಯಾನ ರೂಪ ಶ್ರೇಷ್ಠಮನಸ್ಸಿಂದ ತಯಾರಿಸಿ ಕೊಟ್ಟ, ಅಶ್ವಿನೀ ದೇವತೆಗಳ ರಥಕ್ಕೆ ಮೂರು ಉತ್ತಮ ಚಕ್ರಗಳಿದ್ದು, ಸರ್ವತ್ರಸಂಚಾರಿಯಾಗಿದ್ದು, ಅದಕ್ಕೆ ಅಶ್ವಗಳಾಗಲೀ ಅಶ್ವಬಂಧಿಗಳಾಗಲೀ ಇಲ್ಲ. ಇಂತಹ ರಥನಿರ್ಮಿಸಿದ ಅಸಾಧಾರಣ ಶಕ್ತಿ, ಕಲಾಕೌಶಲ್ಯ, ಸಾಹಸಗಳಿಂದ, ದೇವತ್ವ ಪಡೆದದ್ದು, ಸ್ವರ್ಗ ಭೂಮಿಗಳಲ್ಲಿ ಖ್ಯಾತಿಯ ಚಿನ್ಹೆಯಾಗಿದೆ. ಇದನ್ನು ವಿವೇಚನಾ ದೃಷ್ಟಿಯಿಂದ ನೋಡತಕ್ಕದ್ದಾಗಿದೆ.

ವೃದ್ಧ ಶಿಥಿಲದೇಹ ಪಿತೃಗಳನ್ನು ನಿತ್ಯ ಯುವಕರನ್ನಾಗಿಸಿ, ಸಂಚಾರ ಶಕ್ತರನ್ನಾಗಿ ಮಾಡಿದರು. ಒಂದುಚಮಸ ಪಾತ್ರೆಯನ್ನು ನಾಲ್ಕಾಗಿ ಮಾಡಿದರು. ನಿರ್ಜೀವ ಚರ್ಮದಿಂದ ಸಜೀವ ಗೋವನ್ನು, ನಿರ್ಮಿಸಿದರು. ಇಂತಹ ಪ್ರಶಂಸಾತ್ಮಕ ಕರ್ಮಗಳಿಂದ, ರಥ, ಧನ, ರಕ್ಷಣಾ ಕೀರ್ತಿಗೆ ಪಾತ್ರರಾಗಿ, ದೇವತೆಗಳಿಂದ ಅಮೃತತ್ವ ಪಡೆದರು.

ಋಭುಗಳ ರಕ್ಷಣೆಯಲ್ಲಿ ಸಂಗ್ರಾಮಗಳಲ್ಲಿ ಯಜಮಾನನು ಅಪ್ರತಿಹತನಾಗುತ್ತಾನೆ. ಸಂಪತ್ತು ಪುಷ್ಟಿ ಹಾಗೂ ಉತ್ತಮ ವೀರ್ಯ ಪಡೆಯುತ್ತಾನೆ.

ಯಜಮಾನನು ಸ್ತುತಿ ವಿಜ್ಞಾಪನೆಗಳಿಂದ ಋಭುಗಳನ್ನು ಸೋಮಪಾನಕ್ಕೆ ಆಹ್ವಾನಿಸುತ್ತಾನೆ. ಋಭುಗಳು ಸ್ತುತಿ ಸ್ವೀಕರಿಸಲಿ. ಮಾನವರಿಗೆ ಹಿತಕರ ಸಮಸ್ತ ಭೋಗವಸ್ತುಗಳನ್ನೂ, ಯೋಗ್ಯತಾನುಸಾರ ಪ್ರತಿಫಲವಾಗಿ ಕೊಡಲಿ. ಕಾಂತಿಯುತ ತೃಪ್ತಿಕರ ಶತ್ರುಶೋಷಕ ಧನ, ಅನ್ನ ಸಂಪಾದಿಸಿ ಕೊಡಲಿ. ಅನ್ನ ಸಂಪತ್ತಿನಲ್ಲಿ ಶತ್ರುಗಳಿಗಿಂತ ಅಧಿಕವಾಗಿರುವಂತೆ ಅನುಗ್ರಹಿಸಲಿ.

ರಮಿಸತಕ್ಕ ಪುತ್ರ ಪೌತ್ರರು, ಧನ ಯಶಸ್ಸು, ಶಕ್ತ ಭೃತ್ಯರು –ಇವರನ್ನೆಲ್ಲಾ ಸಂಪಾದಿಸಿಕೊಡಲಿ.

## ಸೂಕ್ತ - 37 (ಉಪ ನೋ ವಾಜಾ ಅಧ್ವರ.....

ಋಷಿ ವಾಮದೇವರು ಋಭುದೇವತೆಗಳನ್ನು ತ್ರಿಷ್ಟುಪ್ ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಚಮಸಪಾತ್ರೆಯಲ್ಲಿ ತುಂಬಿರುವ ತೃತೀಯ ಸವನದ ಸೋಮವು ಋಭುಗಳ ಹೃದಯ ಮನಸ್ಸಿಗೆ ಹರ್ಷಕಾರಕ. ಕರ್ಮಸಿದ್ಧ, ಶಕ್ತಿವರ್ಧಕ, ಘೃತಮಿಶ್ರಿತ, ಯಜ್ಞಸಾಧಕ, ತೃಪ್ತ ಉತ್ಸಾಹಕಾರಕ ಸೋಮ, ಋಭುಗಳಿಗಾಗಿಯೇ ಸಂಕಲ್ಪಿತ.

ದೇವಮಾನವರ ನಡುವೆ ಮನುವಿನಂತೆ, ಯಜಮಾನರು ಋಭುಗಳ ಸಂಘವನ್ನು ಆಹ್ವಾನಿಸಿ, ಸೋಮ ಅರ್ಪಿಸುತ್ತಾರೆ. ಪ್ರಜೆಗಳಿಗೆ ಯಜ್ಞವು ಶೋಭನಾತ್ಮಕವಾಗಿರಲು, ದೇವಮಾರ್ಗಗಳಿಂದ ಋಭುಗಳು, ಯಜ್ಞಕ್ಕೆ ಬರಲಿ. ಯಜಮಾನರಿಗೆ ಯಜ್ಞಮಾಡಲು ಯುಕ್ತಿಮಾರ್ಗ ತೋರಿಸಿ, ಸಮಸ್ತ ದಿಕ್ಕುಗಳನ್ನೂ, ದಾಟುವ ಶಕ್ತಿಕೊಡಲಿ.

ಮಾನವನು ಶ್ರೇಷ್ಠನಾಗಿ ಉತ್ತಮ ಕರ್ಮಿಯಾಗಿ ಉದಾರಧಾತೃವಾಗಿ, ಉತ್ತಮ ಆಶ್ರಯಯುಕ್ತನಾಗಿ ಇರುವಂತೆ, ಋಭು ಇಂದ್ರರು ಸೇರಿ ರಕ್ಷಿಸಲಿ.

ಋಭುಗಳು, ಇಂದ್ರ, ಅಶ್ವಿನೀ ದೇವತೆಗಳು ಮಾನವ ಸ್ತುತಿಕರ್ತರುಗಳಿಗೆ ಪ್ರಸಿದ್ಧಪ್ರಭೂತ ಧನ ಅಶ್ವಸಂಪತ್ತನ್ನು ವೃದ್ಧಿಮಾಡಲಿ.

## ಸೂಕ್ತ - 38 (ಉತೋ ಹಿ ವಾಂ ದಾತ್ರಾ ಸಂತಿ.....

ಋಷಿ ವಾಮದೇವರು ದ್ಯಾವಪೃಥಿವಿಗಳು ದಧಿಕ್ರಾ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ದಧಿಕ್ರಾದೇವನು ಅಶ್ವರೂಪಿ, ನೀರ ಸಂಚಾರಿ, ಪ್ರಶಂಸಿತ ಶೀಘ್ರಗಾಮಿ, ಪ್ರಧಾನ ನಾಯಕ, ಶತ್ರುಹಿಂಸಕ ಭಯಂಕರ, ಅಪ್ರತಿಹತ, ಸರ್ವವ್ಯಾಪಕ, ಇಷ್ಟಾರ್ಥಪ್ರದ, ಶತ್ರುನಿರೋಧಕ ಸಕಲದಿಕ್‌ವ್ಯಾಪಿ.

ದಧಿಕ್ರಾದೇವನು, ಪರಿಸ್ಥಿತಿಯನ್ನು ಚೆನ್ನಾಗಿ ಅರಿತವ. ಶತ್ರುಶಿರ ಕತ್ತರಿಸುವವ.

ಸಮುಪ್ರದೇಶದಲ್ಲಿ, ರಥಶ್ರೇಣಿಗಳನಡುವೆ, ಸಂಚರಿಸುತ್ತಾ ಮೈಯನ್ನು ಧೂಳಿಂದ ತುಂಬಿಕೊಂಡಿರುವ ದಧಿಕ್ರಾದೇವನು, ಶತ್ರುಗಳಿಂದ ಸುತ್ತುವರಿದಿದ್ದರೂ, ಶಕ್ತಿಯನ್ನು ವೃದ್ಧಿಗೊಳಿಸಿಕೊಳ್ಳುತ್ತಾನೆ.

ದಧಿಕ್ರಾದೇವನೊಂದಿಗೆ, ಅದೇರೂಪಿನ ಸಾವಿರಾರು ಅನುಚರರು ಶತ್ರುನಾಶಕ್ಕೆ ಹೊರಟರು –ಎಂದು ಯುದ್ಧದಲ್ಲಿ ಅನುಸರಿಸುವವರೆಲ್ಲರೂ ಪ್ರಶಂಸಿಸುತ್ತಾರೆ.

ದಧಿಕ್ರಾದೇವನು, ದೇವಮಾನವಾದಿ ಪಂಚ ಪ್ರಜೆಗಳನ್ನೂ, ಆಯಾಪ್ರದೇಶಗಳಲ್ಲಿ ವಿಸ್ತರಿಸಿ, ಹರಡುತ್ತಾನೆ. ಯಜಮಾನರಿಗೆ ಸಂತೋಷ ತಂದು, ಅವರ ಶತ್ರುಗಳನ್ನು ಸೋಲಿಸುತ್ತಾನೆ. ನೂರಾರು ರಥದಲ್ಲಿ ಸಹಸ್ರಾರು ವಿಧದಲ್ಲಿ ಪ್ರಾರ್ಥನೆಯ ಫಲವಾಗಿ, ಯುಕ್ತಫಲ ಅನುಗ್ರಹಿಸುತ್ತಾನೆ.

ಸುಧಸ್ವರಾಜನು ದ್ಯಾವಾಪೃಥಿವಿಗಳಿಂದ, ಅಶ್ವರೂಪಿ ದಧಿಕ್ರಾದೇವನನ್ನು ಪಡೆದನು. ಸುಧಸ್ವನು ಧನ ಪಡೆದು – ದಾನವಾಗಿ, ಅಶ್ವ ಪುತ್ರರುಗಳನ್ನು, ದಸ್ಯುನಾಶಕ್ಕಾಗಿ, ವಧಸಾಧನವಾಗಿ, ಅರ್ಥಿಗಳಿಗೆ ಕೊಟ್ಟನು.

ಯಜಮಾನರಿಗೂ, ದ್ಯಾವಾಪೃಥಿವಿಗಳು ಅಶ್ವ ಪುತ್ರರನ್ನು, ಅನುಗ್ರಹಿಸಲಿ.

**ಸೂಕ್ತ - 39 (ಆಶುಂ ದಧಿಕ್ರಾಂ ತಮು ನು ಷ್ಟವಾಮ.....**

ಋಷಿ ವಾಮದೇವರು ದಧಿಕ್ರಾದೇವನನ್ನು ತ್ರಿಷ್ಟುಪ್ ಮತ್ತು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದಧಿಕ್ರಾದೇವನು ಅಶ್ವರೂಪಿ ಸರ್ವವ್ಯಾಪಿ ರಕ್ಷಕ, ಮಹಾತ್ಮ , ಶೀಘ್ರಚಲನ ಸ್ವಭಾವಿ, ಜಯವಂತ, ವೇಗವಂತ, ಕಾಮವರ್ಷಕ, ಅಖಂಡನೀಯ ಅನ್ನಸಾಧಕ ಕಲ್ಯಾಣಾತ್ಮಕ, ಅನೇಕರಿಂದ ಅಪೇಕ್ಷಿತ, ಅಗ್ನಿಯಂತೆ ಪ್ರಕಾಶಮಾನ, ಮಾನವ ಪ್ರೇರಿತ.

ಮಿತ್ರಾವರುಣರು, ಮಾನವ ಉಪಕಾರಕ್ಕಾಗಿ, ದಧಿಕ್ರಾದೇವನನ್ನು ಒದಗಿಸಿದರು. ಮಿತ್ರಾವರುಣರೊಂದಿಗೆ ಸಮಾನ ಪ್ರೀತಿಯಿಂದ ಇರುವ ದಧಿಕ್ರಾದೇವನು ಸ್ತೋತ್ರಗಳೊಂದಿಗೂ ಸಮಾನ ಪ್ರೀತಿಯಿಂದಿರುವ, ಬಲಸಾಧಕ.

ಯುದ್ಧಕ್ಕೆ, ಯಜ್ಞಕ್ಕೆ, ಇಂದ್ರನನ್ನು ಆಹ್ವಾನಿಸುವಂತೆಯೇ, ಯಜಮಾನರು ದಧಿಕ್ರಾದೇವನನ್ನೂ ಆಹ್ವಾನಿಸುತ್ತಾರೆ, ಹುಲ್ಲಿನ ಆಹಾರ ಕೊಟ್ಟು, ಶೀಘ್ರ ಸ್ತುತಿಮಾಡುತ್ತಾರೆ. ದಧಿಕ್ರಾನೊಂದಿಗೆ, ಅಗ್ನಿ ಮಿತ್ರಾವರುಣರನ್ನೂ, ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತಾರೆ.

ಉಷಃಕಾಲದಲ್ಲಿ ಉಷಸ್ ಹಾಗೂ ಅಗ್ನಿಗಳು, ತಮೋನಾಶಮಾಡಿ, ಪಾಪನಾಶಮಾಡಿ, ಉತ್ಕೃಷ್ಟ ಫಲ ಕೊಡಲಿ. ದಧಿಕ್ರಾದೇವನು ಯಜಮಾನನ ಮುಖವನ್ನು ಸುಗಂಧಯುಕ್ತ ಮಾಡಿ, ಆಯಸ್ಸು ವೃದ್ಧಿಸಲಿ –ಎಂದು ಯಜಮಾನನ ಪ್ರಾರ್ಥನೆ.

**ಸೂಕ್ತ - 40 (ದಧಿಕ್ರಾವ್ಣ ಇದು ನು ಚರ್ಕಿರಾಮ.....**

ಋಷಿ ವಾಮದೇವರು ದಧಿಕ್ರಾ ಹಾಗೂ ಸೂರ್ಯದೇವನನ್ನು ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದಧಿಕ್ರಾದೇವನು ಅಗ್ರಗಾಮಿ ಶೀಘ್ರಗಾಮಿ ಸತ್ವಾತ್ಮಕ, ಗಮನಶೀಲ, ಅಧಿಕವೇಗದವ, ಸಂಚಾರಿ ಸ್ವಭಾವದವ ಸಪ್ಪಳಮಾಡುವವ ಗೋಗಳಧಾರಕ, ಜಗತ್ತನ್ನು ಭರಿಸಲು ಶಕ್ತ ಶ್ರೇಷ್ಠ ಗೋಚರಿಸುವವ, ಉದ್ದಿಷ್ಟಪ್ರದೇಶಕ್ಕೆ ಸೇರಲು ಆತುರದಿಂದಿರುವವ, ಸ್ತುತಿಕರ್ತರೊಂದಿಗೆ ಕೂಡುವವ.

ಸೂರ್ಯ, ಅಗ್ನಿ ಬೃಹಸ್ಪತಿ, ಅಂಗೀರಸಪುತ್ರ ಜಿಷ್ಣು – ಎಲ್ಲರನ್ನೂ ಸ್ತುತಿಸಲು ಯಜಮಾನನು ಅಪೇಕ್ಷಿಸುತ್ತಾನೆ. ಬಲನಿಮಿತ್ತ ದಧಿಕ್ರಾದೇವನನ್ನು ಅನುಸರಿಸುತ್ತಾನೆ.

ಕಕ್ಷಿ ಮತ್ತು ಮುಖದಲ್ಲಿ ಬಂದಿತನಾದ ದಧಿಕ್ರಾದೇವನು, ಅಧಿಕವೇಗದಿಂದ ಹಾಗೂ ಶಕ್ತಿಯಿಂದ ಸಕಲ ಮಾರ್ಗದಲ್ಲೂ ಸಂಚರಿಸುವ ಅಶ್ವರೂಪಿ.

ವಾಯು ಅಂತರಿಕ್ಷಸಂಚಾರಿ, ಅಗ್ನಿಯು ಯಜ್ಞಹೋತೃ, ಗೃಹಸ್ಥಾಗ್ನಿಯು ಗೃಹದ ಪೂಜ್ಯ ಅತಿಥಿ, ಚೈತನ್ಯ ಸ್ವರೂಪಿ, ಆದಿತ್ಯಮಂಡಲಾಂತವರ್ತಿ, ಸತ್ಯಸ್ತುತ.

ದ್ಯುಲ್ಲೋಕಸ್ಥ ಆದಿತ್ಯನು ಪರಬ್ರಹ್ಮ ವಿಭೂತಿ ವಿಶೇಷ ಪ್ರಕಟಿಸುವವ ಉದಕೋತ್ಪನ್ನ, ರಶ್ಮಿ ಸಂಚಾರಿ, ಸತ್ವಾತ್ಮಕ ಸತ್ಯಜಾತ, ಉದಯಾದ್ರಿ ಉತ್ಪನ್ನ.

ದಧಿಕ್ರಾವ್ಣನನ್ನು ಮುಖ್ಯವಾಗಿ ಸ್ತುತಿಸುತ್ತಾ, ಕರ್ಮಕ್ಕೆ ಈ ಕಾಲದಲ್ಲಿ ಉಷಸ್ಸು ಪ್ರೇರಿಸಲಿ ಉಷಃಕಾಲದಲ್ಲಿ ಹವಿಸ್ಸನ್ನು ಅಪೇಕ್ಷಿಸಿ ಸ್ವೀಕರಿಸಲಿ, ಅನ್ನ ಬಲ ಉತ್ಪನ್ನ ಮಾಡಲಿ.

**ಸೂಕ್ತ - 41 (ಇಂದ್ರಾ ಕೋ ವಾಂ ವರುಣಾ ಸುಮ್ನ ಮಾಪ......**

ಋಷಿ ವಾಮದೇವರು ಇಂದ್ರಾವರುಣ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಇಂದ್ರಾವರುಣರು ಪರಾಕ್ರಮಿಗಳು, ಪೂಜ್ಯರು, ದೇವತಾತ್ಮರು, ಪ್ರಭಾವಿಗಳು, ಶ್ರೇಷ್ಠಬಂಧುಗಳು. ಮಾತಾಪಿತೃಗಳಂತೆ 'ಸುಖದಾತರು'. ಶತ್ರುಭಯಂಕರರು. ಶತ್ರುಹಿಂಸಕರು.

ಇಂದ್ರಾವರುಣರು, ಹವಿಸ್ಸು, ಸೋಮ, ಅನ್ನ ಸ್ವೀಕಾರದಿಂದ, ಸಂತೋಷ ಪಟ್ಟು ಹವಿರರ್ಪಿಸುವವರಿಗೆ, ಅನೇಕರೀತಿ ಸ್ತುತಿಸುವವರಿಗೆ, ಅವರ ಪಾಪನಾಶಮಾಡಿ, ರಮಣೀಯ ಧನ ಪ್ರಸಿದ್ಧಿ ಉಂಟುಮಾಡುತ್ತಾರೆ. ಯಜಮಾನರ ಕಲ್ಯಾಣಕ್ಕಾಗಿ, ಭೂಮ್ಯರ್ಥ, ದೀರ್ಘ ಜೀವನಾರ್ಥ, ವೀರ್ಯ ಅಭಿವೃದ್ಧಿಗಾಗಿ, ವಂಶಾಭಿವೃದ್ಧಿಗಾಗಿ, ಸೇಚನಾರ್ಥ, ರಕ್ಷಣೆಗಳೊಂದಿಗೆ ಉತ್ತೇಜಕರಾಗಿರುತ್ತಾರೆ. ಯಜಮಾನನ ಶಕ್ತಿಗೆ ಮೀರಿದ ಶತ್ರುಗಳನ್ನೂ, ದುರಾಸೆಯ ಹಿಂಸಕರನ್ನೂ, ಸೋಲಿಸುವ ಶಕ್ತಿಯನ್ನು ಉಂಟುಮಾಡುತ್ತಾರೆ. ಪರಾಧೀನವಿಲ್ಲದೆ ಸ್ವತಂತ್ರ ಒಡೆಯರಾಗುವಂತೆ ಮಾಡುತ್ತಾರೆ.

ಯಜಮಾನರು ಮನಃಸಂಕಲ್ಪಿತ ಇಚ್ಛೆಯಿಂದ, ಇಂದ್ರಾವರುಣರನ್ನು ನೂತನ ಹಿತರಕ್ಷಣೆಗಳಿಗಾಗಿ, ಸಖಿತ್ವಕ್ಕಾಗಿ, ಸಮೀಪಿಸುತ್ತಾ ಸುತ್ತುವರಿದು ಪ್ರಾರ್ಥಿಸುತ್ತಾರೆ. ಧನಕ್ಕಾಗಿ ಧನಿಕರನ್ನು ಸಮೀಪಿಸುವಂತೆ, ಅನ್ನಯಾಚಿಸುವ ವಿನೀತ ಸ್ತ್ರೀಯಂತೆ, ಯಜಮಾನನ ಸ್ತುತಿಗಳು ಧನಾಪೇಕ್ಷಿಗಳಾಗಿ, ಇಂದ್ರಾವರುಣರನ್ನೂ ಸಮೀಪಿಸುತ್ತಾರೆ.

ನೂತನ ರಕ್ಷಣೆಗಳೊಂದಿಗೆ, ಮಿತ್ರಾವರುಣರು, ತಮ್ಮ ಅಶ್ವಧನಗಳನ್ನು ಯಜಮಾನನಕಡೆ ತಿರುಗಿಸಲಿ. ಅನ್ನಾರ್ಥಯುದ್ಧದಲ್ಲಿ ವಿಜಯಿಗಳಾಗಿ, ಸ್ವಾಮಿಗಳನ್ನಾಗಿ ಮಾಡಿ ರಕ್ಷಣೆಗಳೊಂದಿಗೆ ಇಷ್ಟಾರ್ಥಕರೆಯಲಿ.

ಯಾವ ಹವಿರ್ಯುಕ್ತ ಸ್ತುತಿಯು, ಅಮೃತತ್ವ ಸಂಪಾದಿಸಿ ಕೊಡುವ ಅಗ್ನಿಯಂತೆ, ಇಂದ್ರಾವರುಣರಿಗೆ ಸುಖದಾಯಕ? ಯಾವ ಸ್ತೋಮವು ಇಬ್ಬರಿಗೂ – ಹವಿಸ್ಸು ಸ್ತೋಮಗಳು– ಹೃದಯವಾಸಿಯಾಗುವಂತೆ ಮಾಡುತ್ತವೆ?

**ಸೂಕ್ತ - 42 (ಮಮ ದ್ವಿತಾ ರಾಷ್ಟ್ರಂ ಕ್ಷತ್ರಿಯಸ್ಯ.....**

ಋಷಿ ತ್ರಿಸದಸ್ಯು ಪೌರುಕುತ್ಸರು ಆತ್ಮಾ ಇಂದ್ರಾವರುಣ ದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ತ್ರಿಸದಸ್ಯು ವರುಣರೂಪಿ, ಇಂದ್ರರೂಪಿ, ದ್ಯಾವಾಪೃಥಿವಿರೂಪಿ, ಮಾನವರೂಪಿ, ಸಕಲವನ್ನೂ ತಿಳಿದಪ್ರಜಾಪತಿ. ಸಕಲದೇವತೆಗಳಿಂದ ಸೇವಿತ, ಭೂಮಿ ಮತ್ತು ಸ್ವರ್ಗ ರಾಷ್ಟ್ರಗಳ ಒಡೆಯ, ಸಕಲ ಭೂತಗಳಿಗೂ ಚೈತನ್ಯರೂಪಿ, ಸಕಲರಿಗೂ ಸಮೀಪಸ್ಥ, ಅಪ್ರತಿಹತ, ಶಕ್ತ, ವೈರಿನಾಶಕ.

ಪುರುಕುತ್ಸ ರಾಜನು, ಬಂಧಿತನಾದಾಗ ರಾಜ್ಯ ಅರಕ್ಷಕವಾಯಿತು. ಋಷಿಗಳು ಅದರಪಾಲಕರಾದರು. ಪುರುಕುತ್ಸನ ಪತ್ನಿಯು, ಇಂದ್ರಾವರುಣರನ್ನೂ ಹವಿಸ್ಸುಗಳಿಂದ ತೃಪ್ತಿಗೊಳಿಸಿದಳು. ಇಂದ್ರಾವರುಣರ ಕೃಪೆಯಿಂದ ಋಷಿಗಳು, ಪುರುಕುತ್ಸನ ಪತ್ನಿಯಲ್ಲಿ ಇಂದ್ರಸಮಾನ, ಶತ್ರುನಾಶಕ, ದೇವಸಾನ್ನಿಧ್ಯಉಳ್ಳ ಪ್ರಭುವಾಗಿಲು ಅರ್ಹನಾದ – ತ್ರಿಸದಸ್ಯು – ವನ್ನು ಉತ್ಪನ್ನ ಮಾಡಿದರು.

ಮಾನವ ರೂಪದಲ್ಲಿ ವರುಣನೇ – ತ್ರಿಸದಸ್ಯು –ಆಗಿದ್ದಾನೆ. ದೇವತೆಗಳು ಸಕಲ ಅಸುರನಾಶಕಬಲವನ್ನೂ ಇವನಿಗೇ ಒಪ್ಪಿಸಿದ್ದಾರೆ.

ವರುಣನು ಸಕಲ ಭೂತಗಳನ್ನೂ ಅರಿಯುತ್ತಾನೆ. ವರುಣನೇ ಅತಿಶಯಸ್ತುತಿತ ವೈರಿನಾಶಕ, ಇಂದ್ರರೂಪಿಯಾಗಿ, ಉದಕಬಿಡಿಸಿ, ದ್ಯುಲ್ಲೋಕದಲ್ಲಿ ಉದಕ ಎತ್ತಿಹಿಡಿದು, ಉದಕಸರ್ವತ್ರ ಹರಿಯುವಂತೆ, ಆಕಾಶವ್ಯಾಪಿ ಆಗುವಂತೆ ಮಾಡಿ, ಉದಕ ರಕ್ಷಕನಾಗಿದ್ದಾನೆ.

ಸಕಲಭೂತಗಳೂ ವರುಣನನ್ನು ಅರಿಯುತ್ತವೆ. ಸಂಗ್ರಾಮಾಪೇಕ್ಷಿಗಳೂ, ಸಂಗ್ರಾಮನಿರತರೂ, ವರುಣನನ್ನು ಸಹಾಯಕ್ಕೆ, ಕರೆಯುತ್ತಾರೆ. ಇವನಶಕ್ತಿಯನ್ನು ಯಾರೂ ನಿರೋಧಿಸಲಾರರು. ಸ್ತೋಮ ಸ್ತುತಿಗಳಿಂದ ಹರ್ಷಗೊಂಡಾಗ, ಇವನ ಶಕ್ತಿಗೆ ದ್ಯಾವಾಪೃಥಿವಿಗಳೂ ಭೀತಿಗೊಳ್ಳುತ್ತವೆ.

## ಸೂಕ್ತ - 43 (ಕ ಉ ಶ್ರವತ್‌ಕತಮೋ.....

ಋಷಿ ಪುರುಮೀಳ್ಹಾ ಜಮೀಳ್ಹಾ ಸೌಹೋತ್ರರುಗಳು ಅಶ್ವಿನೀದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಶ್ವಿನೀದೇವತೆಗಳು, ದೇವಾತಾತ್ಮರು, ಶ್ರೇಷ್ಠ ಸಂಚಾರಿ ಅಶ್ವ ಉಳ್ಳವರು, ಮಧುರರಸ ಉತ್ಪಾದಕರು, ದ್ಯುಲ್ಲೋಕದಿಂದ ಬಂದವರು, ಶತ್ರುನಾಶಕರು, ಯಜ್ಞಾರ್ಹರು, ಮರಣರಹಿತರು, ಪ್ರೀತಿಕರರು, ಹವಿರ್ಯುಕ್ತರು.

ಅಂತರಿಕ್ಷಕ್ಕೆ ಮೀರಿದ ಪ್ರದೇಶದಲ್ಲಿ ಇರುವ ಇವರು, ಸೂರ್ಯಪುತ್ರಿಯ ಪಾಲಕರು, ವೇಗಗಾಮಿಗಳಾದ ಇವರ ರಥವನ್ನು, ಸೂರ್ಯಪುತ್ರಿಯೇ ಆರಿಸಿಕೊಂಡಳು.

ಉತ್ತಮಕ್ರಿಯೆಯಿಂದ, ಶೋಭನಾತ್ಮಕ ವೈಶಿಷ್ಟ್ಯ ಪ್ರಕಟಿಸುವ ಇವರು, ಪ್ರೋಕ್ಷಿಸುವ ಜಲದಿಂದ, ಅಶ್ವಗಳು ಕಾಂತಿಯಿಂದ ಸುತ್ತಲೂ ಸಂಚರಿಸುತ್ತವೆ.

ಎಲ್ಲರಿಂದಲೂ ಅರಿಯಲ್ಪಡುವ, ಇವರ ಕೋಪಕ್ಕೆ ಪಾತ್ರರಾಗಿ, ಯಾರೂ ಇವರ ಸಮೀಪ ಇರಲಾರರು.

ಯಜ್ಞಕ್ಕೆ ಬರಲು ಉತ್ಸಾಹಿಗಳಾದ, ವೇಘಗಾಮಿಗಳಾದ, ಅಶ್ವಿನೀದೇವತೆಗಳು, ದ್ಯುಲ್ಲೋಕದ ಸುತ್ತಲೂ ಸಂಚರಿಸುವರು.

ಯಜಮಾನನು, ಪ್ರಕಾಶಕ ಉತ್ತಮ ದೇವತೆಗಳ ನಡುವೆ, ಕಲ್ಯಾಣಕಾರಕ ದೇವತೆಗಳ ಹೃದಯದಲ್ಲಿ, ವಂದನೆ ಅರ್ಪಿಸುತ್ತಾನೆ. ಅಶ್ವಿನೀದೇವತೆಗಳಿಗೆ, ಮಧುರ ಹಾಲುಮಿಶ್ರಿತ ಸೋಮ ಅರ್ಪಿಸುತ್ತಾನೆ.

ಯಜಮಾನನ ಅಭೀಷ್ಟಗಳು, ಅಶ್ವಿನೀದೇವತೆಗಳನ್ನು, ತಲುಪಿದಕೂಡಲೇ ಸಿದ್ಧಿಹೊಂದುತ್ತವೆ. ಒಂದೇ ಮನಸ್ಸಿನವರಾಗಿ, ವೈಶಿಷ್ಟ್ಯವಿವರಿಸುವ ಸಂಯೋಜಿತ, ಸ್ತುತಿಯಿಂದ ಸ್ತುತಿಸುವ ಯಜಮಾನರನ್ನು, ಫಲಪ್ರದ ರಮಣೀಯ ಅನ್ನಕೊಟ್ಟು ರಕ್ಷಿಸಲಿ.

## ಸೂಕ್ತ - 44 (ತಂ ವಾಂ ರಥಂ ವಯಮದ್ಯಾ ಹುವೇಮ.....

ಪುರುಮೀಳ್ಹಾ ಜಮೀಳ್ಹಾ ಸೌಹೋತ್ರಾ ಋಷಿಗಳು ಅಶ್ವಿನೀದೇವತೆಗಳನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಅಶ್ವಿನೀದೇವತೆಗಳು ಆದಿತ್ಯರೂಪರು, ಅನೇಕ ದರ್ಶನೀಯರೂಪರು, ಶಕ್ತಿಯುತರು. ಉತ್ತಮ ಕರ್ಮಗಳಿಂದ, ಪ್ರಸಿದ್ಧಸಂಪತ್ತನ್ನು ಅನುಭವಿಸುವ ಇವರ ಶರೀರಕ್ಕೆ, ಸೋಮಗಳು ಸೇರುತ್ತವೆ. ಸುವರ್ಣ ರಥಿಗಳಾದ ಇವರು, ಪ್ರಥಮಾರ್ಪಿತ ಸ್ತುತಿಯಿಂದ ಆಕರ್ಷಿತರಾಗುತ್ತಾರೆ.

ಯಜಮಾನರು ಮಂತ್ರ ಪೂರ್ವಕವಾಗಿ, ಸೋಮ, ನಮಸ್ಕಾರ, ಸ್ತುತಿಗಳನ್ನು ಅಶ್ವಿನೀದೇವತೆಗಳಿಗೆ ಅರ್ಪಿಸಿ ಯಜ್ಞಕ್ಕೆ ಬರಮಾಡಿಕೊಂಡು ಪೂಜಿಸುತ್ತಾರೆ.

ಪ್ರಖ್ಯಾತವಾದ ವೇಗದ, ಉತ್ತಮ ಕಾಷ್ಟದ, ಸ್ತುತಿವಹಿಸುವ ಸುವರ್ಣರೂಪದ ಧನಯುಕ್ತ, ಅಶ್ವಿನೀದೇವತೆಗಳ ರಥವು, ಸೂರ್ಯನನ್ನು ವಹಿಸಿ, ರಶ್ಮಿಗಳನ್ನು ಒಟ್ಟುಗೂಡಿಸುವಂತಹದು.

ಒಂದೇ ವಿಧವಾದ ಮನಸ್ಸಿನ, ಅಶ್ವಿನೀದೇವತೆಗಳನ್ನು, ಇತರ ಯಜಮಾನರಾರೂ ಹಿಡಿದುನಿಲ್ಲಿಸದಿರಲಿ. ಪೃಥಿವಿ ಅಂತರಿಕ್ಷಗಳಲ್ಲಿ ಎಲ್ಲಿದ್ದರೂ ಯಜಮಾನಾಭಿಮುಖ ದಯಮಾಡಲಿ. ಪುರುಮೀಳ್ಹಾ, ಅಜಮೀಳ್ಹಾ –ಎರಡೂ ಗುಂಪಿನ ಋತ್ವಿಜರೂ ಹೊಂದಿಕೆಯಾಗುವಂತಹ ಸ್ತೋತ್ರಗಳ ಜೊತೆ ಸ್ತುತಿ ಪಠಿಸುತ್ತಾರೆ.

ಯಜಮಾನರ ಸ್ತುತಿಗಳು ಫಲಪ್ರದವಾಗಲಿ. ಅಶ್ವಿನೀದೇವತೆಗಳು ಮಧುರ ಸೋಮಪಾನ ಮಾಡಲಿ. ಯಜಮಾನರಿಗೆ ಪುತ್ರಯುಕ್ತ ಧನ, ರಮಣೀಯ ಅನ್ನ ಕೊಟ್ಟು, ರಕ್ಷಿಸಲಿ.

**ಸೂಕ್ತ - 45 (ಏಷ ಸ್ಯ ಭಾನುರುದಯರ್ತಿ......**

ವಾಮದೇವ ಋಷಿ ಅಶ್ವಿನೀದೇವತೆಗಳನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಿಂದ ಸ್ತುತಿಸುತ್ತಾರೆ.

ಅಶ್ವಿನೀದೇವತೆಗಳು, ಸೂರ್ಯ ಸಂಚಾರಮಾರ್ಗದಲ್ಲೇ, ಸಂಚರಿಸುತ್ತಾರೆ. ಅವರು ಪ್ರಸರಿಸುವ, ಕತ್ತಲುನಾಶಕರಶ್ಮಿಗಳು, ಲೋಕ ವಿಸ್ತೃತಿ ಮಾಡುತ್ತವೆ. ಆದಿತ್ಯ ಶಿಖರಪ್ರದೇಶದಲ್ಲಿ ಸೂರ್ಯಬಿಂಬದೊಡನೆ ಅಶ್ವಿನೀದೇವತೆಗಳ ರಥಸೇರುತ್ತದೆ.

ಅಶ್ವಿನೀದೇವತೆಗಳ ರಥ, ನಾಶರಹಿತವಾದದ್ದು, ಸಂಕಲ್ಪಿಸಿದೊಡನೆಯೇ ಲೋಕ ಸಂಚಾರಮಾಡುವುದು, ನಾಲ್ಕನೆಯ ಚಮಸಪಾತ್ರೆಯಿಂದ, ಮೂರುವಿಧ ಅನ್ನಗಳಿಂದ ಪ್ರಕಾಶವಾಗಿ, ಹಿತಕರ ಅನ್ನ ತುಂಬಿಕೊಂಡು, ಉಷಃಕಾಲದಲ್ಲಿ ಅಶ್ವಿನೀದೇವತೆಗಳೊಂದಿಗೆ, ಊರ್ಧ್ವಮುಖ ಸಂಚರಿಸುತ್ತದೆ.

ಅಶ್ವಿನೀದೇವತೆಗಳ, ಅಶ್ವಗಳು ಶ್ರೇಷ್ಠಸಂಚಾರಿಗಳು, ಮಧುರವಾದವು, ಎದುರುಬೀಳದವು, ಭಾರವಹಿಸಲು ಸಮರ್ಥವಾದವು. ಸೋಮ ಉತ್ತೇಜಿತವಾದವು, ಹರ್ಷದಾಯಕ, ಉಷಃಕಾಲದಲ್ಲಿ ಎಚ್ಚರಗೊಂಡು ಉದಕ ಹರಡುವುವು. ಗಾರ್ಹಪತ್ಯ ಅಗ್ನಿಯು, ಶ್ರೇಷ್ಠಸೋಮ ಹೊಂದಿರುವುವು.

ಅಧ್ವರ್ಯುಗಳು ಶುದ್ಧಹಸ್ತರು, ಕರ್ಮವನ್ನು ಸಾಂಗವಾಗಿ ನೆರವೇರಿಸುವವರು, ಯಜ್ಞಕರ್ಮ ಪರಿಶೀಲಿಸುವವರು, ಭೋಗಕಾರಿ ರಕ್ಷಕ, ಹವಿರ್ಯುಕ್ತ ಯಜಮಾನರು ಕಾರ್ಯನಿರ್ವಾಹಕರು.

ಯಜಮಾನರು ಪ್ರತಿದಿನ, ಉಷಃಕಾಲದಲ್ಲಿ ಅಶ್ವಿನೀದೇವತೆಗಳನ್ನು, ಸ್ತುತಿಸುತ್ತಾರೆ. ಯಜಮಾನನ ಯಜ್ಞಗೃಹಕ್ಕೆ ಅಶ್ವಗಳೊಂದಿಗೆ ಬಂದು ಪೂರ್ಣಚಮಸ ಪಾತ್ರೆಯಲ್ಲಿ ಸೋಮಪಾನ ಮಾಡಲಿ.

**ಸೂಕ್ತ - 46 (ಅಗ್ರಂ ಪಿಬಾ ಮಧೂನಾಂ ಸುತಂ......**

ಋಷಿ ವಾಮದೇವರು ವಾಯು ಹಾಗೂ ಇಂದ್ರ ದೇವತೆಗಳನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವಾಯುವು ಅತ್ಯಧಿಕ ಶಕ್ತಿಯುತ ಸುವರ್ಣಾತ್ಮಕ ಶೋಭನಾತ್ಮಕ ರಥಯುಕ್ತ. ವಾಯುವಿನ ರಥಕ್ಕೆ 'ನಿಯುತ್ತು'ಗಳೇ ಅಶ್ವಗಳು ಇಂದ್ರನೇ ಸಾರಥಿ.

ಅಪರಿಮಿತ ಇಷ್ಟಾರ್ಥಸಿದ್ಧಿಗಾಗಿ ಸಕಲದೇವತೆಗಳೊಡನೆ, ಇಂದ್ರವಾಯುಗಳು ಸಮಾನ ಪ್ರೀತಿಯಿಂದ, ಯಜ್ಞಕ್ಕೆ ಬರುವುದನ್ನೇ, ಯಜಮಾನರು ಕಾದಿದ್ದಾರೆ.

ಸ್ವರ್ಗಪ್ರಾಪಕ ಯಜ್ಞವ, ಯಜ್ಞಗೃಹದಲ್ಲಿ, ಸೋಮರಸ ಹಿಂಡಿಸಿದ್ದಾಗಿದೆ.

ಸಹಸ್ರಾರು ಅಶ್ವಗಳು, ಇಂದ್ರ ವಾಯುಗಳನ್ನು, ಹವಿರ್ಯುಕ್ತ ಹವಿರ್ದಾನಿ, ಯಜಮಾನನಲ್ಲಿಗೆ ಅಪರಿಮಿತ ಇಷ್ಟಾರ್ಥಸಿದ್ಧಿಗಾಗಿ, ಕರೆತರುತ್ತವೆ. ಸಿದ್ಧಪಡಿಸಿದ ಸೋಮವನ್ನು, ವಾಯುವೇ ಇಂದ್ರಾದಿಗಳಿಗಿಂತಲೂ, ಮೊದಲು ಪಾನಮಾಡುತ್ತಾನೆ.

ಇಂದ್ರವಾಯುಗಳು ಯಜ್ಞಕ್ಕೆ ಬರಲಿ. ಅಶ್ವಗಳನ್ನು ಬಿಚ್ಚಿ, ಶ್ರೇಷ್ಠ ರಥದಿಂದಿಳಿದು, ಯಜ್ಞವಹಿಸಲಿ. ಸೋಮಪಾನ ಮಾಡಲಿ.

**ಸೂಕ್ತ** - 47 (**ವಾಯೋ ಶುಕ್ರೋ ಅಯಾಮಿ ತೇ**.......

ಋಷಿ ವಾಮದೇವರು ವಾಯು ಮತ್ತು ಇಂದ್ರದೇವತೆಗಳನ್ನೂ ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಇಂದ್ರ ವಾಯುಗಳು ಶಕ್ತಿಪಾಲಕರು, ವೀರ್ಯವಂತರು, ಒಂದೇ ರಥದಲ್ಲಿ ಬರುವವರು, ನೇತೃಗಳು ಯಜ್ಞವಾಹಕರು. ಇಂದ್ರವಾಯುಗಳಿಬ್ಬರೇ, ಸಿದ್ಧಪಡಿಸಿದ ಸೋಮಪಾನ ಮಾಡಲು ಯೋಗ್ಯರು. ತಗ್ಗು ಪ್ರದೇಶಕ್ಕೆ ಹರಿವ ಉದಕದಂತೆ, ಸೋಮವು ಇವರನ್ನೇ ಸೇವಿಸುತ್ತದೆ.

ವಾಯುವು, ಎಲ್ಲರಿಂದಲೂ ಅಪೇಕ್ಷಿತ, ನಿಯನ್ತ್ರಾಮಕ, ಅಶ್ವವಂತ, ಪ್ರಕಾಶಮಾನ, ಯಜಮಾನನು ದೇವಲೋಕ ಸ್ಥಾನ ಅಪೇಕ್ಷಿಸಿ, ವ್ರತಾಚರಣೆ ಮಾಡಿ, ಇತರ ದೇವತೆಗಳಿಗೆ ಅರ್ಪಿಸುವ ಮುನ್ನ, ಸೋಮವನ್ನು ವಾಯುವಿಗೆ, ಅರ್ಪಿಸುತ್ತಾನೆ.

ಇಂದ್ರವಾಯುಗಳು, ಅಶ್ವಿನೀ ಮರುತ್ತುಗಳನ್ನು, ಅನೇಕರು ಅಪೇಕ್ಷಿಸುತ್ತಾರೆ. ಯಜಮಾನನ ರಕ್ಷಣಾರ್ಥ, ಇಂದ್ರವಾಯುಗಳು ಬರಲಿ, ಪ್ರೀತಿಪಾತ್ರ ಅಶ್ವಗಳನ್ನು ಕೊಡಲಿ.

**ಸೂಕ್ತ** - 48 (**ವಿಹಿ ಹೋತ್ರಾ ಅವೀತಾ ವಿಪ್ರೋ**......

ವಾಮದೇವ ಋಷಿ ವಾಯುದೇವನನ್ನು ಅನುಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವಾಯುವು, ನಿಯನ್ತ್ರಾಮಕ ಅಶ್ವಗಳುಳ್ಳವ, ಇಂದ್ರಸಾರಥ್ಯ ಹೊಂದಿದವ, ಅಮಂಗಳ ತಡೆಗಟ್ಟುವವ, ಸಂಪತ್ಪೋಷಕ.

ದ್ಯಾವಾಪೃಥಿವಿಗಳಿಂದ ಸೇವಿತ, ವಾಯುವಿನ ರಥವನ್ನು, ಶತ್ರುಭಯಂಕರ ರಾಜನಂತೆ, ಮನೋವೇಗದ, ತೊಂಭತ್ತೊಂಭತ್ತು ಅಶ್ವಗಳುವಹಿಸುತ್ತವೆ.

ಪುಷ್ಟವಾದ ನೂರು, ಸಾವಿರಾರು ಅಶ್ವಗಳ ಆಹ್ಲಾದಕರ ರಥದಲ್ಲಿ ಶಕ್ತಿಯೊಡನೆ, ಆಹ್ಲಾದಕರ ಸೋಮಪಾನಕ್ಕೆ, ವಾಯುದೇವನು ಬರಲಿ. ಶುದ್ಧ, ಇತರರಿಂದ ಪರಿಗ್ರಹಿಸಲ್ಪಡದ ಹಿಂಡಿದ ಸೋಮಾಹುತಿಗಳನ್ನು, ಭಕ್ಷಿಸಲಿ. ಯಜಮಾನನಿಗೆ ಧನಕೊಡಲಿ.

**ಸೂಕ್ತ** - 49 (**ಇದಂ ವಾಮಾಸ್ಯೇ ಹವಿಃ**.....

ಋಷಿ ವಾಮದೇವರು ಇಂದ್ರ ಬೃಹಸ್ಪತೀ ದೇವತೆಗಳನ್ನು ಗಾಯತ್ರೀ ಛಂದಸ್ಸಿನ

ಹವಿಸ್ಸು ಪ್ರಿಯವಾದದ್ದು. ಯಜಮಾನರು ಹಿತಕರಸೋಮ ಸಿದ್ಧಪಡಿಸಿ, ಸ್ತುತಿವಾಕ್ಯಗಳಿಂದ ಪ್ರಾರ್ಥಿಸಿ, ಹವಿರ್ದಾತ ಯಜಮಾನ ಗೃಹದಲ್ಲಿ, ಸೋಮಪಾನ ಹರ್ಷಕ್ಕೆ, ಇಂದ್ರ ಬೃಹಸ್ಪತಿಗಳನ್ನು ಆಹ್ವಾನಿಸುತ್ತಾರೆ.

ಇಂದ್ರ ಬೃಹಸ್ಪತಿಗಳು ಯಜಮಾನನ ಗೃಹಕ್ಕೆ ದಯಮಾಡಲಿ ಅರ್ಪಿತ ಸೋಮ ಶಸ್ತ್ರ ಮಂತ್ರ ಪಠಣಸ್ವೀಕರಿಸಿ, ಸೋಮಪಾನ ಮಾಡಿ, ಹರ್ಷವ್ಯಕ್ತಪಡಿಸಲಿ.

ಇಂದ್ರ ಬೃಹಸ್ಪತಿಗಳು, ಯಜಮಾನನಿಗೆ, ನೂರು ಗೋವುಗಳನ್ನು, ಸಹಸ್ರಾರು ಅಶ್ವಗಳಿಂದ ಕೂಡಿದ ಧನವನ್ನೂ ಕೊಡಲಿ.

## ಸೂಕ್ತ - 50 (ಯಸ್ತಸ್ತಂಭ ಸಹಸಾ.....

ಋಷಿ ವಾಮದೇವರು, ಬೃಹಸ್ಪತಿ, ಇಂದ್ರ ದೇವತೆಗಳನ್ನು, ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಬೃಹಸ್ಪತಿಯು ಶ್ರೇಷ್ಠಪ್ರಜ್ಞ, ಶಬ್ದಮಿತ್ರ, ಲೋಕಪ್ರಸಿದ್ಧ ವಿಶ್ವಪಾಲಕ, ಕಾಮವರ್ಷಕ, ಸರ್ವದೇವಾತ್ಮಕ, ಮೂರುಲೋಕವ್ಯಾಪಿ ಸಂತೋಷಕರ, ಜಿಹ್ವೆಯವ, ಶತ್ರುಭೀಕರ.

ಸ್ವಶಕ್ತಿಯಿಂದ ದಶದಿಕ್ಕುಗಳನ್ನೂ ನಿಲ್ಲಿಸಿದ, ಬೃಹಸ್ಪತಿಯನ್ನು, ಅವನ ಅಶ್ವಗಳು ದೂರದ ಸ್ವರ್ಗದಿಂದ ಕರೆತಂದಿದೆ. ಆದಿತ್ಯನ ಅಂತರಿಕ್ಷದಲ್ಲಿ, ಸಪ್ತ ಛಂದಸ್ಸಿನ ಮುಖದಿಂದ ಹಾಗೂ ಅನೇಕ ಪ್ರಾಕಾರಗಳಲ್ಲಿ ಉತ್ಪನ್ನರಾಗಿ, ಸಪ್ತರಶ್ಮಿಯುಕ್ತನಾಗಿ ಕತ್ತಲೆ ನಾಶಮಾಡಿದನು.

ಇಂದ್ರನು, ಮಂತ್ರಪಠಿಸುತ್ತಿದ್ದ, ಅಂಗೀರಸ್ಸುಗಳೊಡನೆ ಸೇರಿ ರಾಕ್ಷಸವಲನನ್ನು ಸೀಳಿ, ಹವಿಕ್ಷೀರಯುಕ್ತ ಗೋವುಗಳನ್ನು ಬಿಡಿಸಿ, ಸ್ವತಂತ್ರ್ಯಗೊಳಿಸಿದ.

ರಾಜರಲ್ಲೇ ಶ್ರೇಷ್ಠನಾದ ಬ್ರಹ್ಮನು, ಪ್ರಥಮಸ್ಥಾನ ಆಕ್ರಮಿಸುವವ, ಸ್ವನಿವಾಸದಲ್ಲಿ ತೃಪ್ತಿಯಿಂದ ಸುಖವಾಸ ಮಾಡುವವನು ಸರ್ವದಾ ಭೂಮಿಯಲ್ಲಿ ಸಸ್ಯ ಸಂಪತ್ತುಗಳೊಡಗೂಡಿ ಫಲಕೊಡುವವ.

ಬೃಹಸ್ಪತಿಗೆ ಯಜ್ಞದಲ್ಲಿ ಪ್ರಥಮಸ್ಥಾನ ಕೊಟ್ಟು ಪೂಜಿಸುವರಾಜನು, ಸಮಸ್ತ ಶತ್ರುಸೈನ್ಯವನ್ನೂ, ತನ್ನ ಶಕ್ತಿಯಿಂದ, ವೀರ್ಯದಿಂದ, ಆಕ್ರಮಿಸಿ ವಿಜಯಿಯಾಗುತ್ತಾನೆ. ಆ ರಾಜನು ಬ್ರಹ್ಮಶಕ್ತಿಯಿಂದ ಬ್ರಾಹ್ಮಣನಿಗೆ ಧನ ಅರ್ಪಿಸುವವನಾಗಿ, ಶತ್ರುಗಳಿಗೆ ಸೇರಿದ, ತನ್ನ ಸ್ವಂತಜನರ ಸಕಲಸಂಪತ್ತನ್ನೂ ತನ್ನ ಪ್ರಭುತ್ವದಲ್ಲೇ ಇಟ್ಟು ಕೊಳ್ಳುತ್ತಾನೆ, ಸಕಲ ದೇವತೆಗಳಿಂದ ರಕ್ಷಿತನಾಗುತ್ತಾನೆ.

ಪುರಾತನ ಮೇಧಾವಿ, ಪ್ರಕಾಶಮಾನ ಋಷಿಗಳು, ಸ್ಥಾಪಿಸಿ, ಉಪಚರಿಸಿ, ಸ್ತುತಿಸಿ ದೇವತೆಗಳಿಗೆ ಸಂತೋಷ ಉಂಟುಮಾಡಿದ್ದಾರೆ. ಯಜಮಾನರೂ ಅಪಾರ ಸ್ತುತಿಸ್ತೋತ್ರ ನಮಸ್ಕಾರಗಳನ್ನು ಅರ್ಪಿಸುತ್ತಾರೆ.

ವಿದ್ವತ ಸ್ತುತಿ, ಹವಿಸ್ಸುಗಳಿಂದ, ಈ ಯಜ್ಞಫಲಪ್ರದವಾಗಿ ಅಹಿಂಸಕ ವಿಸ್ತೃತವಾಗಲಿ. ಇಂದ್ರಬೃಹಸ್ಪತಿಗಳ ಪೂಜೆ ಮುಂದುವರೆಯಲು, ಯಜಮಾನರ ಅಪೇಕ್ಷೆ.

ಬೃಹಸ್ಪತಿ ಇಂದ್ರರು, ಹರ್ಷದಿಂದ ಇಷ್ಟಾರ್ಥಪ್ರದರಾಗಿ, ಶರೀರ ಪೂರ್ಣ ವ್ಯಾಪಿಸುವಂತೆ, ಸೋಮಪಾನ ಮಾಡಲಿ. ಅನುಗ್ರಹ ಬುದ್ಧಿಯಿಂದ ಹೊಂದಿಕೊಂಡು ಸ್ತುತಿ ಆಲಿಸಿ, ಕರ್ಮ ರಕ್ಷಿಸಿ ಯಜ್ಞಕ್ಷಾಪಾಡಲಿ.

ಬೃಹಸ್ಪತಿ ಇಂದ್ರರು ಹವಿರ್ದಾತ ಯಜಮಾನರನ್ನು, ಪ್ರಭುಪ್ಪರನ್ನಾಗಿ ಮಾಡಲಿ. ಶತ್ರುಗಳನ್ನು ಎದುರಿಸಿ ನಾಶಮಾಡಲಿ. ಶ್ರೇಷ್ಠ ವೀರ್ಯವಂತ ಪುತ್ರರನ್ನು ಕೊಟ್ಟು ಅವರು ಧನಾಧೀಶರಾಗುವಂತೆ ಮಾಡಲಿ. ಧನಕೊಡಲಿ.

## (ಅಷ್ಟಕ - 3, ಅಧ್ಯಾಯ - 8)

### ಸೂಕ್ತ - 51 (ಇದಮು ತ್ಯತ್ ಪುರುತಮಂ......

ಋಷಿ ವಾಮದೇವರು ಉಷಾ ದೇವತೆಯನ್ನು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಉಷಸ್ಸುಗಳು ಒಂದೇರೂಪದವರು, ಜರಾರಹಿತರು, ಪ್ರಕಾಶಮಾನರು, ಮಂಗಳಾತ್ಮರು, ಸಂಚಾರಿಗಳು, ಜಗದುಪಕಾರಿಗಳು, ದೇವತಾತ್ಮರು, ಪ್ರಸಿದ್ಧರು. ದ್ಯುಲೋಕ ಸಂಬಂಧಿಗಳು, ಆದಿತ್ಯಪುತ್ರಿರೂಪರು, ಸರ್ವತ್ರ ಪ್ರಸರಿಸುವವರು= ಸತ್ಫಲ ಉಳ್ಳವರು, ಲೋಕ ಪ್ರಸಿದ್ಧರು. ತೇಜಸ್ವಿಗಳು, ಪ್ರಭಾರೂಪರು, ವಿಶೇಷರೀತಿ ಕಂಗೊಳಿಸುವವರು. ಅಪರಿಮಿತವರ್ಣಗಳು, ಆರಂಭಕಾಲದಿಂದ ಸಂಪದ್ಯುಕ್ತರು.

ಆರೋಚಕ ಶರೀರದಿಂದ, ವಿಶುದ್ಧರಾಗಿ, ಆಕರ್ಷಕರಾಗಿ, ಉಷಸ್ಸುಗಳು ಮಹತ್ತಾದ ಕತ್ತಲೆಮರೆಮಾಡುತ್ತಾ, ಲೋಕಚೈತನ್ಯರಾಗಿ, ಪೂರ್ವದಿಕ್ಕಿನಲ್ಲಿ ಉದಿಸಿ ಸಂಚರಿಸುತ್ತಾರೆ.

ಉಷಸ್ಸುಗಳು ಯಜ್ಞಗಾಮಿ ಅಶ್ವಗಳನಡುವೆ, ಪ್ರಪಂಚವನ್ನೆಲ್ಲಾ ಶೀಘ್ರವಾಗಿ ಸಂಚರಿಸುತ್ತವೆ. ಯಜ್ಞದಲ್ಲಿ ಋತ್ವಿಜರನ್ನು, ಅವರವರ ಕರ್ತವ್ಯ ನಿರ್ವಹಿಸಲು, ಸೋಮಾದಿಗಳನ್ನು ದೇವತೆಗಳಿಗೆ ಅರ್ಪಿಸಲು, ಎಚ್ಚರಿಸುತ್ತಾರೆ. ನಿದ್ರಿಸುವ ಎರಡು ಕಾಲುಗಳ, ನಾಲ್ಕು ಕಾಲುಗಳ ಪ್ರಾಣಿಗಳನ್ನು ಎಚ್ಚರಿಸಿ, ಅವನ್ನು ವ್ಯಾಪಾರಕ್ಕೆ ತೊಡಗುತ್ತಾರೆ. ಕರ್ತವ್ಯ ಲೋಭಿಗಳು ಜಿಗುಪ್ಸೆಯಿಂದ ಪ್ರಜ್ಞಾಶೂನ್ಯರಾಗಿ, ಆಲಸ್ಯದಿಂದ ನಿದ್ದೆಮಾಡುತ್ತಾರೆ.

ಉಷಸ್ಸುಗಳ ವೈಯುಕ್ತಿಕ ಭೇದ ಅರಿಯಲಾಗುವುದಿಲ್ಲ. ಈ ಉಷಸ್ಸುಗಳ ನಡುವೆ, ಋಭುಗಳು, ಚಮಸಾದಿಗಳನ್ನು ನಿರ್ಮಾಣ ಮಾಡಿದ ಉಷಸ್ಸು ಯಾವುದು? -ಎಂದು ತಿಳಿಯದು.

ನವಗ್ವ, ದಶಗ್ವರೆಂದು ಪ್ರಸಿದ್ಧ ಛಂದೋರೂಪಿ ಮುಖದ, ಅಂಗೀರಸ್ಸುಗಳ ಸಮೂಹದಲ್ಲಿ, ಉಷಸ್ಸುಗಳು ಧನವತಿಯಾಗಿ ಪ್ರಕಾಶಿಸುತ್ತಾ, ಪುರಾತನ ಅಥವಾ ನೂತನ ರಥದಲ್ಲಿ ಯಜಮಾನನಲ್ಲಿಗೆ ಬರಲಿ.

ಉದಕಸೃಷ್ಟಿಗೆ ಕಾರಣರಾಗಿರುವ ಸ್ತುತಿ ಶಸ್ತ್ರ ಮಂತ್ರಗಳಿಂದ, ಪ್ರಶಂಸಿತರಾಗಿರುವ ಉಷಸ್ಸುಗಳು, ಯಜ್ಞಕರ್ತರನ್ನು ಸುಖದನಿಮಿತ್ತ, ಎಚ್ಚರಗೊಳಿಸಲಿ. ಗಮನಾದಿ ವ್ಯಾಪಾರ

ಸಾಮರ್ಥ್ಯ ಉಂಟುಮಾಡಲಿ. ಶಕ್ತಿಯುತ ಸತ್ಪುತ್ರಾದಿ ಧನವನ್ನೂ, ಧನಕ್ಕೆ ಪುತ್ರರು ಒಡೆಯರಾಗುವಂತೆಯೂ, ಮಾಡಲಿ.

"ನಾವು, ನಮಗೆ ಸಮಾನರಾದ ಯಜಮಾನರ ನಡುವೆ, ಅನ್ನ ಸಂಪತ್ತುಗಳಿಗೆ ಒಡೆಯರಾಗುವಂತಾಗಲಿ. ನಮ್ಮ ಅನ್ನ ಸಂಪತ್ತೆಲ್ಲವನ್ನೂ, ದ್ಯುಲೋಕ ಪೃಥಿವಿಗಳು ಧರಿಸಲಿ" – ಎಂದು ಯಜಮಾನನ ಪ್ರಾರ್ಥನೆ.

**ಸೂಕ್ತ - 52 (ಪ್ರತಿ ಷ್ಯಾ ಸೂನರೀ ಜನೀ.....**

ಋಷಿ ವಾಮದೇವರು ಉಷಾ ದೇವತೆಯನ್ನು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಉಷೆಯು ಆದಿತ್ಯನ ದುಹಿತೃರೂಪಿ, ತೇಜಸ್ವಿ, ಪ್ರಶಸ್ತ್ಯಳು, ಶ್ರೇಷ್ಠನೇತೃ, ಆಕರ್ಷಕಳು, ರಶ್ಮಿಜನನಿ, ಯಜ್ಞಪತಿ, ಪ್ರಭಾಯುತೆ, ಜಗದ್ವ್ಯಾಪಿ, ಹೊಂಬಣ್ಣದವಳು, ಧನದೊಡೆಯಳು, ಸ್ತುತಿವಾಕ್ಕುಳ್ಳವಳು, ಫಲೋತ್ಪಾದಕಳು.

ಉಷೆಯು ಸಹೋದರಿ, ರಾತ್ರಿಯ ಕೊನೆಯಭಾಗದಲ್ಲಿ, ತಮಸ್ಸನ್ನು ನಾಶಪಡಿಸುತ್ತಾ, ಎಲ್ಲರಿಗೂ ಗೋಚರವಾಗುತ್ತಾಳೆ. ಉಷೆಯು ಆವಿರ್ಭೂತಳಾಗಿ ಕತ್ತಲಲ್ಲಿ ಹಿಂಸಿಸಲು ಬಂದ, ಶತ್ರುಗಳನ್ನು ಹೊಡೆದೋಡಿಸುವಳು. ತನ್ನ ತೇಜಸ್ಸನ್ನು ಜಗತ್ತಿಗೆಹರಡುತ್ತಾ, ಅಂಧಕಾರ ಓಡಿಸುತ್ತಾ, ಹವಿರೂಪ, ಅನ್ನರಕ್ಷಿಸುತ್ತಾಳೆ. ರಶ್ಮಿಗಳಿಂದ ದ್ಯುಲೋಕ ವಿಸ್ತಾರಗೊಳಿಸಿ, ಪ್ರೀತಿಕಾರಕ ಅಂತರಿಕ್ಷದಲ್ಲಿ, ಪ್ರಕಾಶಯುತ ಕಾಂತಿಯುತವಾಗಿ, ವ್ಯಾಪಿಸುತ್ತಾಳೆ.

ಅಶ್ವಿನೀ ದೇವತೆಗಳಿಗೆ ಸಮಾನ ಪೂಜ್ಯಳಾಗಿ, ಸಖೀ ಭೂತಳಾಗಿ, ಯಜ್ಞದಲ್ಲಿ ಅವರೊಂದಿಗೆ ಭಾಗವಹಿಸುವಳು, ಸ್ತುತಿಸುವ ಯಜಮಾನ ಕಡೆಗೆ, ಗಮನ ಕೊಡಲು, ಯಜಮಾನರು ಉಷೆಯನ್ನು ಉಪಚರಿಸುತ್ತಾರೆ.

**ಸೂಕ್ತ - 53 (ತದ್ದೇವಸ್ಯ ಸವಿತುರ್ವಾರ್ಯಂ ಮಹದ್......**

ವಾಮದೇವ ಋಷಿ ಸವಿತೃದೇವನನ್ನು ಜಗತೀ ಛಂದಸ್ಸಿನ ಋಕ್‌ನಲ್ಲಿ ಸ್ತುತಿಸುತ್ತಾರೆ.

ಸವಿತೃದೇವನು ಪೂಜ್ಯ, ಪ್ರಾಜ್ಞ, ಪ್ರಕಾಶಮಾನಿ, ಪ್ರಜಾಪತಿ, ಪ್ರಕೃಷ್ಟಜ್ಞಾನಿ, ಪ್ರಾಣಿಗಳಿಗೆ ಪ್ರಭು. ಜಗತ್ಪಾಲಕ, ಜಗತಪ್ರಭು, ಯಜ್ಞರಕ್ಷಕ, ಸತ್ಕರ್ಮ ಪ್ರೇರಕ. ದೇವತಾತ್ಮ ಬಲಶಾಲಿ. ಧನಪೂರ್ಣ, ಸರ್ವರಿಗೂ ಆಶ್ರಯಿ, ನಾನಾಸುಖಕ್ಕೆ ಆಧಾರ.

ಸವಿತೃವು ತನ್ನ ತೇಜಃ ಪ್ರಕಾಶದಿಂದ, ಲೋಕಪ್ರಕಾಶಕನಾಗಿ, ಯಜ್ಞರಕ್ಷಕನಾಗಿ, ಸಕಲ ಭೂತಜಾತಧಾರಕನಾಗಿ, ಹೊಂಬಣ್ಣದ ಕವಚಧಾರಿಯಾಗಿ, ಅನೇಕ ದೃಷ್ಟಿಯಿಂದ ನೋಡುವವನಾಗಿ, ಸರ್ವತ್ರವ್ಯಾಪಿಸುವವನಾಗಿ, ಸ್ವರ್ಗ ಪೃಥ್ವಿಗಳನ್ನು ತೇಜಸ್ಸಿಂದವ್ಯಾಪಿಸಿ, ಸುಖ ಉಂಟುಮಾಡುತ್ತಾನೆ. ಶತ್ರುಗಳಿಗೆ ಸಿಲುಕನು. ಸವಿತೃವು ತನ್ನಕಾಂತಿಯಿಂದ, ಲೋಕವನ್ನು ನಿಯಮಿತ ಕಾರ್ಯಗಳಲ್ಲಿ ಸ್ಥಾಪಿಸಿ, ಚೈತನ್ಯಯುತವಾಗಿ, ಸೃಷ್ಟಿಕಾರ್ಯಕ್ಕೆ ಸಹಾಯಕನಾಗಿದ್ದಾನೆ. ಪ್ರಜಾಪಾಲನೆಗೆ ಸಹಾಯಹಸ್ತ ನೀಡುತ್ತಾನೆ.

ಸವಿತೃವು ಮೂರುಲೋಕಗಳನ್ನು ಅಗ್ನಿ, ವಾಯು, ಆದಿತ್ಯ, ತತ್ವಗಳಿಂದಲೂ, ಇಂದ್ರ ಪ್ರಜಾಪತಿ ಸತ್ವಗಳಿಂದ ಮೂರು ದಿವ್ಯಲೋಕಗಳನ್ನೂ, ಅಂತರಿಕ್ಷ ಪೃಥ್ವಿಗಳನ್ನು ಮಹಾತ್ಮದಿಂದ ವ್ಯಾಪಿಸುತ್ತಾನೆ. ಅಸಾಧಾರಣ ಕರ್ಮಗಳಿಂದ, ಸ್ವಪ್ರೇರಣೆಯಿಂದ, ಸ್ವಸಂತೋಷದಿಂದ ರಕ್ಷಿಸುತ್ತಾನೆ.

ಋಭುಗಳೊಡನೆ ಸವಿತೃವು ಯಜ್ಞಕ್ಕಿಬರಲಿ, ಗೃಹಪಾಲಿಸಲಿ. ಸವಿತೃವು ಹವಿರ್ದಾತ ಯಜಮಾನನ ಅಪೇಕ್ಷಿತ ಪ್ರಾರ್ಥನೆ ಸಲ್ಲಿಸಲಿ. ತೇಜೋರೂಪ ಸಂಪತ್ತು ಧನವನ್ನು, ಶ್ರೇಷ್ಠಸತ್ಪುತ್ರ, ಪ್ರಜೆಗಳು ಅನ್ನಗಳನ್ನು ಅಹೋರಾತ್ರಿಗಳಲ್ಲಿ ಸ್ವಸಂತೋಷದಿಂದ ಕೊಡಲಿ. ಯಜಮಾನರ ಪಾಪನಾಶಮಾಡಿ ಸುಖಕೊಡಲಿ, ಸಂತೋಷಕರನಾಗಿರಲಿ.

## ಸೂಕ್ತ - 54 (ಅಭೂದ್ದೇವಃ ಸವಿತಾ ವಂದ್ಯೋ ನು ನ.....

ಋಷಿ ವಾಮದೇವರು ಸವಿತಾ ದೇವನನ್ನು ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಸವಿತೃದೇವನು, ಪೂಜ್ಯ ದೇವತಾತ್ಮ ತೃತೀಯಸವನದಲ್ಲಿ ಸ್ತುತ್ಯನಾಗಿ, ಉದಿಸಿ ಗೋಚರವಾಗಿದ್ದಾನೆ. ಪೃಥ್ವಿಯ ವಿಸ್ತೃತ ದ್ಯುಲೋಕದಿಂದ, ಆದಿತ್ಯನು ಪ್ರೇರಿಸುವವನು. ಇವನ ಸ್ಥಿರ ನಾಶರಹಿತ ಕರ್ಮಗಳನ್ನು ಹಿಂಸಿಸಬಾರದು.

ಯಜ್ಞಾರ್ಹದೇವತೆಗಳು ಹವಿರ್ದಾತ ಯಜಮಾನರನ್ನು ಪ್ರಶಂಸಿಸುವಂತೆ ಮಾಡಿ, ಉತ್ಕೃಷ್ಟ ಸೋಮ ಹೊಂದಲು ಅನುಜ್ಞೆ ಕೊಡುತ್ತಾರೆ. ಶ್ರೇಷ್ಠ ಹಸ್ತಗಳಿಂದ ಮಹತಕರ್ಮಗಳಿಂದ, ಸಕಲ ಲೋಕಗಳನ್ನೂ ಧರಿಸಿ, ಮಾನವ ಯಜಮಾನರಿಗೆ ಜೀವನ, ಪುತ್ರ ಪೌತ್ರಾದಿಗಳನ್ನು ಅನುಗ್ರಹಿಸುತ್ತಾರೆ. ಸವಿತೃವು ಯಜಮಾನನನ್ನು ಎತ್ತರಕ್ಕೆ ಹಾರಿಸಿ, ವಸತಿ ನಿರ್ಮಿಸಿದ್ದಾನೆ. ಸಂಚರಿಸುತ್ತಿದ್ದ ಸವಿತೃವಿನ ಆಜ್ಞೆಯನ್ನು ಯಜಮಾನರು ಪಾಲಿಸುವವರಾದರು.

ಪ್ರಜ್ಞಾರಹಿತ್ಯದಿಂದ, ಅಶಕ್ತಿಯಿಂದ ಮಾನವದೋಷದಿಂದ – ಸವಿತೃವಿನಲ್ಲಾಗಲೀ ಇತರ ದೇವತೆಗಳಲ್ಲಾಗಲೀ ಮಾನವರಲ್ಲಾಗಲೀ – ಮಾಡಿರಬಹುದಾದ ಪಾಪದಿಂದ, ಪಾಪಿಷ್ಠರಾದ ಯಜಮಾನರನ್ನು ಈ ಕರ್ಮಕಾರ್ಯದಲ್ಲಿ ಪಾಪರಹಿತರನ್ನಾಗಿ ಪುರಸ್ಕರಿಸಲಿ.

ಮನುಸಂಬಂಧಿ ಯಜಮಾನರಿಗೆ, ರಮಣೀಯ ಧನಹಂಚುತ್ತಾ ಯಜ್ಞಕರ್ಮದಲ್ಲಿ ಉತ್ತಮ ಸಂಪತ್ತನ್ನು ಯಜಮಾನರಿಗೆ ಸವಿತೃವು ಅನುಗ್ರಹಿಸಲಿ. ಸವನತ್ರಯಗಳಲ್ಲೂ ಸೋಮರಸಹಿಂಡುವ, ಸೌಭಾಗ್ಯ ಜನಕ ಯಜಮಾನರಿಗೆ, ಇಂದ್ರ, ದ್ಯಾವಾಪೃಥಿವಿ, ನದ್ಯಭಿಮಾನ ದೇವತೆ, ಆದಿತ್ಯ, ಅದಿತಿಗಳು ಸುಖ ಒದಗಿಸಲಿ.

## ಸೂಕ್ತ - 55 (ಕೋ ವಸ್ತ್ರಾತಾ ವಸವಃ ಕೋ ವರೂತಾ.....

ಋಷಿ ವಾಮದೇವರು ವಿಶ್ವೇದೇವತೆಗಳನ್ನು ತ್ರಿಷ್ಟುಪ್ ಮತ್ತು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದೇವತೆಗಳು ಸುಖಸ್ಥಾನದಾತರು, ಆಕರ್ಷಕರೂಪಿಗಳು, ನಿತ್ಯವಾದ ಫಲನಿರ್ಮಾಪಕರು,

ಹಾಗೂ ಸುಖಕಾರಕ, ಇಂದ್ರ ವಿಷ್ಣುಗಳು ಆದರಣೀಯರು, ಪರ್ವತ ಮರುತ್ತುಗಳು ದೇವತಾತ್ಮರು. ಭಗನು ರಕ್ಷಕ, ವರುಣನು ಪಾಲಕ, ಅದಿತಿಯು ದೇವಮಾತೆ, ಅಹೋರಾತ್ರಿಗಳು ನಾಶರಹಿತರು, ಮಿತ್ರನು ಸುಪ್ರಜ್ಞಾನದವ, ಅಹರ್ಬುಧ್ನ ದೇವತೆಗಳೊಡಗೂಡಿದ ದ್ಯಾವಾಪೃಥಿವಿಗಳು ರಕ್ಷಕರು ಹಾಗೂ ದೇವತಾತ್ಮರು, ಇಂದ್ರ ಮಿತ್ರಾದಿಗಳು ಸಕಲ ದೇವತೆಗಳಿಗೂ ಪಾಲಕರು, ಅಗ್ನಿಯು ಸೌಭಾಗ್ಯಕೊಡುವ ಧನಸಮೂಹದೊಡೆಯ. ಉಷೋ ದೇವಿಯು ಧನವಂತಳು, ಅನ್ನವಂತಳು ಸತ್ಯವಾಕ್ಕಿನ ಪ್ರೀತಿಉಳ್ಳವಳು.

ನಮ್ಮ ರಕ್ಷಕರಾರು? ದುಃಖ ನಿವಾರಕರಾರು? ಯಜ್ಞಕಾಲದಲ್ಲಿ ಧನದಾತರಾರು? –ಎಂದು ಯಜಮಾನನು ಚಿಂತಿಸುತ್ತಾನೆ. ಮಾನವಶತ್ರುಗಳಿಂದ ರಕ್ಷಣೆ, ಪುತ್ರ ಯುಕ್ತ ಸುಖ, ಇಷ್ಟಾರ್ಥಸಿದ್ಧಿ ಆಕರ್ಷಕ ಅಪೇಕ್ಷಿತ ಫಲ, ಸೌಭಾಗ್ಯ ಅಧಿಕಧನ – ಇವುಗಳನ್ನು ಯಜಮಾನನು ಅಪೇಕ್ಷಿಸುತ್ತಾನೆ.

ಮಿತ್ರಾವರುಣ, ಅಗ್ನಿಗಳಿಗೆ ಅರ್ಪಿತವಾಗುವ ಅನ್ನಕ್ಕೆ ವಿರೋಧಮಾಡಲು ಯಜಮಾನರು ಶಕ್ತರಲ್ಲ. ವಸು, ದ್ಯಾವಾಪೃಥಿವಿ, ವರುಣ, ಮಿತ್ರ ದೇವತೆಗಳನ್ನು ಸಖ್ಯಕ್ಕಾಗಿ ಪ್ರಾರ್ಥಿಸುತ್ತಾರೆ. ಅದಿತಿ ನದ್ಯಭಿಮಾನ ದೇವತೆ ಸ್ವಸ್ತಿ ದೇವತೆಗಳನ್ನೂ ಪ್ರಾರ್ಥಿಸುತ್ತಾರೆ.

ಸವಿತೃ, ಭಗ, ವರುಣ, ಮಿತ್ರ, ಆರ್ಯಮ, ಇಂದ್ರ – ಇವರುಗಳು ತಮ್ಮ ಧನದೊಂದಿಗೆ, ಯಜ್ಞಕ್ಕೆ ಬರಲಿ. ಆಯಾಯ ದೇವತೆಗಳು, ತತ್ಸಂಬಂಧವಾದ ಧನವನ್ನು ಯಜಮಾನನಿಗೆ ಕೊಡಲಿ. ದೇವತೆಗಳು ಬೇರೆ ಯಾವ ಗಮನವೂ, ಇಲ್ಲದಂತೆ ರಕ್ಷಿಸಲಿ.

ಪುರುಷದೋಷಗಳಿಂದಾದ ಪಾಪಗಳಿಂದ, ಯಜಮಾನರು ರಕ್ಷಣೆ ಅಪೇಕ್ಷಿಸುತ್ತಾರೆ.

**ಸೂಕ್ತ - 56 (ಮಹೀ ದ್ಯಾವಾಪೃಥಿವೀ ಇಹ ಜ್ಯೇಷ್ಠೇ......**

ಋಷಿ ವಾಮದೇವರು ದ್ಯಾವಾಪೃಥಿವಿ ದೇವತೆಗಳನ್ನು ತ್ರಿಷ್ಟುಪ್ ಮತ್ತು ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ದ್ಯಾವಾಪೃಥಿವಿಗಳು ವಿಸ್ತೃತರು, ಅಗಾಧರು, ಸುಂದರರು, ಯಜ್ಞಾರ್ಹರು, ದೇವತಾತ್ಮರು, ಸತ್ಯಾತ್ಮರು, ಸ್ಥಿರಮತಿಗಳು, ಪ್ರಕಾಶಮಾನರು ಪವಿತ್ರರು ಮಹತ್ವರೂಪಿಗಳು, ಪ್ರಶಸ್ತ್ಯರು.

ದ್ಯಾವಾಪೃಥಿವಿಗಳು ಪ್ರಜೆಗಳ ಮೇಲೆ ಕೃಪಾವಿಷ್ಟರು, ಇಷ್ಟಾರ್ಥಸುರಿಸುವವರು, ದ್ರೋಹಬುದ್ಧಿ ಇಲ್ಲದವರು, ಯಜ್ಞನಿರ್ವಾಹಕರು. ಆಧಾರರಹಿತರಾಗಿರುವ ಇವರು, ವಿಶ್ವವ್ಯಾಪಕರಾಗಿದ್ದು ಯಾರನ್ನೂ ಹಿಂಸಿಸರು. ಮಹತ್ವರೂಪಿಗಳಾಗಿ, ದೇವತೆಗಳನ್ನು ಪುತ್ರರನ್ನಾಗಿ ಹೊಂದಿ, ಒಟ್ಟಿಗೆ ಸೇರಿಕೊಂಡಿರುವರು.

ಪ್ರಜಾಪತಿಯು ದ್ಯಾವಾಪೃಥಿವಿಗಳನ್ನು ಉತ್ಪನ್ನ ಮಾಡಿದನು. ಕರ್ಮ ಕೌಶಲ್ಯದಿಂದ ವೈಯಕ್ತಿಕಕರ್ಮಗಳಿಗಾಗಿ ಪ್ರೇರಿಸಿದನು. ಉತ್ತಮ ಕರ್ಮಗಳಿಂದ, ಪ್ರಜಾಪತಿಯು ಲೋಕದಲ್ಲಿ ಸ್ತುತಿತನಾಗಿದ್ದಾನೆ.

ಪರ್ಜನ್ಯನು, ಉಪಕಾರ ಬುದ್ಧಿಯಿಂದ, ದ್ಯಾವಾಪೃಥಿವಿಗಳನ್ನು ಪ್ರತ್ಯೇಕ ಮಾಡಿದನು, ಪರ್ಜನ್ಯನು ಮರುತ್ತು ಮತ್ತು ಮೇಘದೊಡಗೂಡಿ ವೃಷ್ಟಿ ಸೇಚಕನಾಗಿದ್ದಾನೆ.

ದ್ಯಾವಾಪೃಥಿವಿಗಳು ಸ್ವರೂಪ ಬಲದಿಂದ ಶುದ್ಧಕಾರಕರಾಗಿ ಪ್ರಕಾಶಿಸುತ್ತಾ ಸರ್ವಕಾಲದಲ್ಲೂ ಯಜ್ಞವನ್ನು ವಹಿಸುತ್ತಾರೆ.

ಯಜಮಾನರು ಅತಿಶಯ ಪ್ರಭೂತ ಸ್ತುತಿನಿರ್ಮಿಸಲು ದ್ಯಾವಾಪೃಥಿವಿಗಳನ್ನು ಸಮೀಪಿಸುತ್ತಾರೆ. ಪ್ರಕಾಶಮಾನ ಮಂತ್ರಗಳಿಂದ ಸ್ತುತಿಯನ್ನು ನಿರ್ಮಿಸುತ್ತಾರೆ. ಯಜ್ಞಾರ್ಹ ದೇವತೆಗಳೊಂದಿಗೆ, ತಮ್ಮ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳುತ್ತಾರೆ.

ಮಂತ್ರಸ್ತುತ ಯಜ್ಞದಲ್ಲಿ, ಯಜ್ಞದ ಸುತ್ತಲೂ ದ್ಯಾವಾಪೃಥಿವಿಗಳು, ಆಸೀನರಾಗಲಿ. ಸತ್ಕರ್ಮಿ ಯಜಮಾನರಿಗೆ, ಅನ್ನ ಹಂಚಿ ಅನ್ನ ತುಂಬಿಕೊಡಲಿ. ಪತ್ನಿ, ಗೃಹ, ಧನ, ಅನ್ನ, ರಥ, ಸೇವಕರನ್ನೂ ಆಲಂಸಿಸಿ ರಕ್ಷಿಸಲಿ.

## ಸೂಕ್ತ - 57 (ಕ್ಷೇತ್ರಸ್ಯ ಪತಿನಾ ವಯಂ.....

ಋಷಿ ವಾಮದೇವರು, ಕ್ಷೇತ್ರಪತಿ, ಶುನ, ಶುನಸೀರಾ, ಸೀತಾ ದೇವತೆಗಳನ್ನು ಅನುಷ್ಟುಪ್ ತ್ರಿಷ್ಟುಪ್, ಪುರಉಷ್ಣಿಕ್ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಕ್ಷೇತ್ರಪತಿದೇವನು, ಯಜ್ಞಕರ್ತ, ಯಜಮಾನನಿಗೆ ಮಿತ್ರರೂಪಿ, ಜಯತರುವವ, ವೃಷ್ಟಿಕರ, ಗೋ ಅಶ್ವಗಳನ್ನು ದಾನಮಾಡಿ, ಪವಿತ್ರ ಮಧುರ ಉದಕ ಸುರಿಸಿ, ಸುಖಪಡಿಸುವವ, ಕ್ಷೇತ್ರಪತಿಯ ಆಜ್ಞಾನುಸಾರ ವ್ಯವಹರಿಸುವ ಯಜಮಾನನಿಗೆ, ಕ್ಷೇತ್ರಪತಿಯು ಹಿತಕರ ಸುಖಕರನಾಗಿರಲಿ. ಮಧುರ ವ್ರೀಹ್ಯಾದಿ ಓಷಧಿಗಳು ಉದಕಗಳು ಸತ್ವಯುಕ್ತವಾಗಿರಲಿ.

ಶುನಾಸೀತಾ ದೇವತೆಗಳು, ಸ್ತುತಿವಾಕ ಪಠಣಸೇವಿಸಲು ದ್ಯುಲ್ಲೋಕ ಉದಕ ಹರಿಯಲಿ. ಪೃಥಿವಿಯನ್ನು ತೋಯಿಸುವಂತೆ ಮಾಡಲಿ. ಪರ್ಜನ್ಯನು ಸುಖವಾಗಿ ವರ್ಷಿಸಲಿ. ನೇಗಿಲು ಮುಂತಾದ ಸಾಧನಗಳು ಸುಖವಾಗಿ ಉಳಲಿ. ವೃಷಭದೊಡನೆ ರೈತರು ತಮ್ಮ ಕಾರ್ಯದಲ್ಲಿ ಸುಖವಾಗಿ ತೊಡಗಲಿ. ಶುನಾಸೀತಾ ದೇವತೆಗಳು ಸುಖ ಉಂಟುಮಾಡಲಿ.

ಸೀತೆಯು ಉತ್ತಮ ಫಲದಾತ, ಧನದಾತ, ಶೋಭನಾತ್ಮಕ ಮಂಗಳಾತ್ಮಕ. ಯಜಮಾನಾಭಿಮುಖಳಾಗಿ ಪೂಜೆಗೊಳ್ಳಲಿ, ಪೂಷನು ಸೀತೆಯನ್ನು ನಿಯಮಿಸಲಿ. ಇಂದ್ರದೇವನು ಸೀತೆಯನ್ನು ಹಿಡಿಯಲಿ.

ಉದಕಯುಕ್ತಳಾಗಿ ಪ್ರತಿಸಂವತ್ಸರದಲ್ಲೂ, ವೃಷ್ಟಿಕರೆಯಲಿ, ಕೃಷಿಕರು ಕರ್ಮ ಕಾರ್ಯವನ್ನು ಸುಖವಾಗಿ ಮಾಡಲಿ. ನೇಗಿಲುಗಳು ಸುಖವಾಗಿ ಉಳಲಿ, ಮೂಗುದಾರಗಳು ಸುಖವಾಗಿ ವೃಷಭವನ್ನು ಹಿಡಿಯಲಿ. ವೃಷಭಗಳು ಸುಖವಾಗಿ ಭಾರವಹಿಸಲಿ.

ಸೂಕ್ತ - 58 (ಸಮುದ್ರಾದೂರ್ಮಿರ್ಮಧುಮಾ......

ಋಷಿ ವಾಮದೇವರು ಅಗ್ನಿ ಸೂರ್ಯಗಾವ, ಆಪ, ಘೃತ ದೇವತೆಗಳನ್ನು ತ್ರಿಷ್ಟುಪ್ ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ಘೃತವು ದೇವತೆಗಳಿಗೆ ಜಿಹ್ವಾರೂಪಿಯಾಗಿ, ಅಮೃತಕ್ಕೆ ನಾಭಿರೂಪವಾಗಿದೆ. ಘೃತವು ಅಸುರರಿಂದ ಕ್ಷೀರ, ದಧಿ, ಆಜ್ಯ – ತ್ರಿರೂಪಗಳಲ್ಲಿ; ಗೋವುಗಳಲ್ಲಿ ಇಡಲ್ಪಟ್ಟಿತು. ದೇವತೆಗಳು ಇದನ್ನು ಪಡೆದರು. ಇಂದ್ರ ಸೂರ್ಯ ಅಗ್ನಿಗಳು ಒಂದೊಂದೇ ತತ್ತ್ವವನ್ನು 'ಸ್ವಧಾ' ನಿಮಿತ್ತ ಉಂಟುಮಾಡಿದರು.

ಘೃತಧಾರೆಗಳು, ಯಜ್ಞಕರ್ತರ ಸ್ತುತಿನಮಸ್ಕಾರಗಳಿಂದ, ಭಕ್ತಿಪೂರ್ವಕ ಮನಸ್ಸಿಂದ, ಪವಿತ್ರಮಾಡಲ್ಪಟ್ಟು ತೃಪ್ತಿಕಾರಕವಾಗಿ ಪ್ರವಹಿಸುತ್ತಾ, ಅರ್ಪಿತವಾಗುತ್ತದೆ. ವಾಯುವೇಗದಿಂದ ಘೃತಧಾರೆಗಳು, ಪರಿಧಿ ಭೇದಿಸುತ್ತಾ, ರಸಗಳಿಂದ ಅನ್ನ ಪ್ರವೇಶಿಸುತ್ತದೆ. ಅಗ್ನಿಯನ್ನು ಆಲಂಗಿಸಿ ಸೇರುತ್ತವೆ, ಅಗ್ನಿ ಪ್ರಜ್ವಲಿಸುವಂತೆ ಮಾಡುತ್ತದೆ, ವ್ಯಾಪಿಸುವ ಈ ಧಾರೆಯನ್ನು ಅಗ್ನಿಯು ಸೇವಿಸಿ ಸ್ವೀಕರಿಸುತ್ತದೆ.

ಅಂತರಿಕ್ಷಾಗ್ನಿಯಿಂದ ಮಧುರ ಉದಕಗಳು ಉದ್ಭವಿಸುತ್ತವೆ. ವೃತ್ರನಿಂದ ನೋಡಲ್ಪಡದ ನೂರಾರು ಧಾರೆಗಳಲ್ಲಿ ಪ್ರವಹಿಸುತ್ತವೆ. ಪ್ರವಾಹ ಮಧ್ಯದಲ್ಲಿ ಹಿರಣ್ಯರೂಪಿ 'ವೈದ್ಯುತಾಗ್ನಿ' ಸ್ಥಾಪಿತನಾಗಿದ್ದಾನೆ.

ಸೋಮ ಹಿಂಡಲ್ಪಟ್ಟಲ್ಲೆಲ್ಲಾ ಘೃತಧಾರೆಗಳು ಯಜ್ಞಾಗ್ನಿಯನ್ನು ಸೇರುತ್ತವೆ.

ಅಗ್ನಿಯು ಕಾಮವರ್ಷಕ, ಮಹಾತ್ಮ ಅತಿಶಬ್ದಕಾರಕ, ಯಜ್ಞಾತ್ಮನಾಗಿದ್ದಾನೆ. ವೇದರೂಪಿ ನಾಲ್ಕು ಶೃಂಗಗಳು, ಸವನತ್ರಯರೂಪಿ ಮೂರು ಪಾದಗಳೂ, ಬ್ರಹೌಧನ ಮತ್ತು ಪ್ರವರ್ಗರೂಪದ ಎರಡು ಶೀರ್ಷಗಳೂ, ಸತಚಿದ್ರೂಪಗಳಾದ ಏಳು ಹಸ್ತಗಳೂ, ಮಂತ್ರ ಬ್ರಾಹ್ಮಣ ಕಲ್ಪ ಎಂಬ ಮೂರು ಪ್ರಾಕಾರಗಳು –ಇವುಗಳಿಂದ ಅಗ್ನಿಯು ಮಾನವರನ್ನೆಲ್ಲಾ ವ್ಯಾಪಿಸಿದ್ದಾನೆ.

ಸಮುದ್ರದಲ್ಲಿ ಬಡವಾಗ್ನಿರೂಪದಲ್ಲಿ, ಹೃದಯದಲ್ಲಿ ವೈಶ್ವಾನರಾಗ್ನಿರೂಪದಲ್ಲಿ, ಉದಕದಲ್ಲಿ ವೈಶ್ವಾನರಾಗ್ನಿರೂಪದಲ್ಲಿ, ಅನ್ನದಲ್ಲಿ ಜಠರಾಗ್ನಿರೂಪದಲ್ಲಿ – ತೇಜೋರೂಪ ಸ್ಥಾನದಲ್ಲಿ ಅಗ್ನಿ ಆಶ್ರಯಪಡೆದಿದ್ದಾನೆ.

ಘೃತಪ್ರವಾಹವು ಮಾಧುರ್ಯೋಪೇತವಾಗಿ ಅಗ್ನಿಯನ್ನು ಪ್ರವೇಶಿಸುತ್ತದೆ. ಇಂತಹ ಧಾರೆಗಳನ್ನು ಧ್ಯಾನಿಸೋಣ. ಋತ್ವಿಜರು ಸಂಘಾತಕ್ಕೆ ಕಾರಣವಾದ ಸ್ತುತಿಪಠಿಸಲಿ. ಯಜ್ಞವನ್ನು ಪೂಜ್ಯದೇವತೆಗಳು ಸೇವಿಸಲಿ.

ಅದೃವರ್ಣಾತ್ಮಕ ದೇವನು, ನಿರ್ವಹಿಸುವ ಈ ಕರ್ಮದಲ್ಲಿ, ನಾಲ್ಕು ವೇದಗಳನ್ನೂ ತಿಳಿದ ಬ್ರಹ್ಮನು, ಈ ಸ್ತುತಿಗಳನ್ನು ಆಲಿಸಲಿ.